ದ್ದೆನು. ಸಾಕ್ಷಿ ಛಿದಾಮನು ನನ್ನ ಬಳಿ ಎಲ್ಲವನ್ನೂ ಹೇಳಿ ನನ್ನ ಕಾಲು ಗಳನ್ನು ಹಿಡಿದುಕೊಂಡನು. 'ನನ್ನ ಹೆಂಡತಿಯನ್ನು ಉಳಿಸುವ ಮಾರ್ಗ ತೋರಿಸಿರಿ' ಎಂದು ಬೇಡಿಕೊಂಡನು. ನಾನು ಯಾವ ಮಾತನ್ನೂ ಹೇಳ ಲಿಲ್ಲ. ನಂತರ ಸಾಕ್ಷಿಯು 'ನಮ್ಮ ಅಣ್ಣನು ಅನ್ನ ಹಾಕೆಂದು ಹೆಂಡತಿ ಯನ್ನು ಕೇಳಿದಾಗ ಆಕೆ ಅನ್ನ ಬಡಿಸದಿರಲು ಕೋಪದಿಂದ ಅವಳ ತಲೆಯ ಮೇಲೆ ಹೊಡೆದನು ಎಂದು ಹೇಳಿದರೆ ನನ್ನ ಹೆಂಡತಿ ಉಳಿದು ಕೊಳ್ಳುವುದು ಸಾಧ್ಯವೆ' ಎಂದು ನನ್ನ ಸಂಗಡ ಕೇಳಿದನು. ಆಗ ನಾನು 'ಎಚ್ಚರಿಕೆ—ಮಗನೇ, ಕೋರ್ಟಿನಲ್ಲಿ ಎಳ್ಳಷ್ಟೂ ಸುಳ್ಳಾಡಬೇಡ –ಅದಕ್ಕಿಂತ ದೊಡ್ಡ ತಪ್ಪು ಮತ್ತಾವುದೂ ಇಲ್ಲ'....ಇತ್ಯಾದಿ."

ರಾಮಲೋಚನನು ಮೊದಲು ಚಂದಿರೆಯನ್ನು ಕಾಪಾಡುವ ಉದ್ದೇಶ ದಿಂದ ಹಲವು ಕತೆಗಳನ್ನು ಸೃಷ್ಟಿಸಿ ಸಿದ್ಧಪಡಿಸಿದ್ದನು. ಆದರೆ ಚಂದಿರೆ ಅಡ್ಡದಾರಿ ಹಿಡಿಯಲು—"ಸಾಕಪ್ಪಾ ಸಾಕು. ಕೊನೆಗಾಲದಲ್ಲಿ ಸುಳ್ಳು ಸಾಕ್ಷಿ ಹೇಳಿದ ತಪ್ಪಿಗೆ ಸಿಕ್ಕಿಕೊಂಡು ಶಿಕ್ಷೆ ಅನುಭವಿಸಲೇ? ಎಷ್ಟು ಗೊತ್ತಿದೆಯೋ ಅಷ್ಟು ಹೇಳುವುದೇ ಸರಿಯಾದ ಮಾರ್ಗ"—ಎಂದು ಯೋಚಿಸಿ ತನಗೆ ತಿಳಿದದ್ದನ್ನೇ ಹೇಳಿದನು. ಆದರೆ ಅದಕ್ಕಿಂತ ಸ್ವಲ್ಪ ಹೆಚ್ಚಾಗಿ ಹೇಳದೆಯೂ ಇರಲಿಲ್ಲ.

ಡೆಪ್ಯುಟಿ ಮ್ಯಾಜಿಸ್ಟ್ರೇಟರು ಮೊಖದ್ದಮೆಯನ್ನು ಸೆಷನ್ಸ್‌ಗೆ ಕಳುಹಿಸಿದರು.

ಈ ನಡುವೆ ಆರಂಬ ಸಾರಂಬ, ಸಂತೆ ಸಾರಿಗೆ, ಸುಖ ದುಃಖ ಎಲ್ಲ ಕೆಲಸ ಕಾರ್ಯಗಳೂ ನಡೆಯುತ್ತಲೇ ಇದ್ದುವು; ಹಿಂದಿನ ವರ್ಷಗಳಂ ತೆಯೇ ಹೊಸ ಬೆಳೆಯ ಗದ್ದೆಯಲ್ಲಿ ಶ್ರಾವಣದ ಜಡಿಮಳೆ ಸುರಿಯುತ್ತಿತ್ತು.

ಪೋಲೀಸಿನವರು ಅಪರಾಧಿ ಮತ್ತು ಸಾಕ್ಷಿಗಳನ್ನು ಕೋರ್ಟಿನಲ್ಲಿ ತಂದು ಸಿಲ್ಲಿಸಿದರು. ಇದಿರಿನಲ್ಲಿದ್ದ ಮುನ್ಸೀಫ್ ಕೋರ್ಟಿನಲ್ಲಿ ಬಹು ಜನ ತಮ್ಮ ತಮ್ಮ ವ್ಯಾಜ್ಯದ ಕೂಗು ಕಾಯುತ್ತ ಕುಳಿತಿದ್ದರು. ಅಡಿಗೆ ಮನೆಗೆ ಸೇರಿದಂತಿದ್ದ ಜಗಲಿಯೊಂದರ ವಿಭಾಗದ ಜಗಳದಲ್ಲಿ ವಾದಿಸಲು ಕಲ್ಕತ್ತೆಯ ಪ್ರಸಿದ್ಧ ವಕೀಲರೊಬ್ಬರು ಬಂದಿದ್ದರು. ವ್ಯಾಜ್ಯದಲ್ಲಿ

ವಾದಿಯ ಬೆಂಬಲವಾಗಿ ಇಪ್ಪತ್ತೆರಡು ಜನ ಸಾಕ್ಷಿಗಳೂ ಬಂದಿದ್ದರು. ನೂರಾರು ಜನ ತಮ್ಮ ತಮ್ಮ ಖಾತೇ ಲೆಕ್ಕದ (ಚೂಲ್ ಚೇರಾ) ಕೂದಲು ಕವಲು ಮೀಮಾಂಸೆ ನಡೆಸಲು ತವಕಪಡುತ್ತಿದ್ದರು. ಪ್ರಪಂಚದಲ್ಲಿ ಅದಕ್ಕಿಂತ ಅತಿಶಯವಾದದ್ದು ಮತ್ತೇನೂ ಇಲ್ಲವೆಂದು ಅವರುಗಳ ನಂಬಿಕೆ. ಛಿದಾಮನು ಕಿಟಕಿಯಿಂದ ಈ ಅತ್ಯಂತ ಗಡಿಬಿಡಿಯ ಪ್ರತಿದಿನದ ಪ್ರಪಂಚವನ್ನು ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದನು. ಎಲ್ಲವೂ ಕನಸಿನಂತೆ ತೋರುತ್ತಿತ್ತು. ಕಾಂಪೌಂಡಿನಲ್ಲಿದ್ದ ದೊಡ್ಡ ಆಲದ ಮರದಲ್ಲಿ ಕೋಗಿಲೆಯೊಂದು ಕೂಗುತ್ತಿತ್ತು. ಅದಕ್ಕೆ ಯಾವ ಕಾನೂನಾಗಲೀ ಕೋರ್ಟಾಗಲೀ ಅಡ್ಡಿಮಾಡುತ್ತಿರಲಿಲ್ಲ.

ಚಂದಿರೆಯು ಜಡ್ಜಿಗಳ ಹತ್ತಿರ—'ಓ ಸಾಹೇಬರೇ, ಒಂದೇ ಮಾತನ್ನು ಮತ್ತೆ ಮತ್ತೆ ಇನ್ನೂ ಎಷ್ಟು ಸಲ ಹೇಳಲಿ' ಎಂದಳು.

ಜಡ್ಜ್ ಸಾಹೇಬರು ಅವಳಿಗೆ ತಿಳುವಳಿಕೆ ಹೇಳುತ್ತಾ—"ನೀನು ಒಪ್ಪಿಕೊಳ್ಳುತ್ತಿರುವ ಅಪರಾಧಕ್ಕೆ ಶಾಸ್ತಿಯೇನು ಬಲ್ಲೆಯೋ?"

"ಇಲ್ಲ."

"ಅದಕ್ಕೆ ಶಾಸ್ತಿ ಫಾಸೀ (ಗಲ್ಲು)."

"ಸ್ವಾಮೀ, ನಿಮ್ಮ ಕಾಲಿಗೆ ಬೀಳುತ್ತೇನೆ. ನನಗೆ ಅದನ್ನೇ ವಿಧಿಸಿರಿ. ನಿಮಗೇನಿಷ್ಟವೋ ಹಾಗೆ ಮಾಡಿರಿ. ನನ್ನನ್ನು ಸುಮ್ಮನೆ ಹಿಂಸಿಸಬೇಡಿರಿ" ಎಂದು ಚಂದಿರೆ ಹೇಳಿಬಿಟ್ಟಳು.

ಛಿದಾಮನನ್ನು ಕೋರ್ಟಿನಲ್ಲಿ ಹಾಜರ್ಮಾಡಿದಾಗ ಚಂದಿರೆಯು ಮುಖ ತಿರುಗಿಸಿಕೊಂಡಳು. ಜಡ್ಜಿಗಳು ಸಾಕ್ಷಿಯ ಕಡೆ ತಿರುಗಿ—"ಇವನು ನಿನಗೇನಾಗಬೇಕು ಹೇಳು" ಎಂದರು.

ಚಂದಿರೆ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು—"ಅವನು ನನ್ನ ಗಂಡ" ಎಂದಳು.

"ಅವನು ನಿನ್ನನ್ನು ಪ್ರೀತಿಸುವುದಿಲ್ಲವೊ ?"

"ಓ ಅಪಾರವಾಗಿ ಪ್ರೀತಿಸುವನು."

"ನೀನು ಅವನನ್ನು ಪ್ರೀತಿಸುವುದಿಲ್ಲವೋ ?"

"ಚೆನ್ನಾಗಿ ಪ್ರೀತಿಸುತ್ತೇನೆ."

ಛಿದಾಮನನ್ನು ಪ್ರಶ್ನಿಸಿದಾಗ—"ನಾನು ಕೊಲೆ ಮಾಡಿದೆನು" ಎಂದು ಅವನು ಹೇಳಿದನು.

"ಏಕೆ ?"

"ಅನ್ನ ಹಾಕೆಂದು ಕೇಳಿದೆ—ಅತ್ತಿಗೆ ಅನ್ನ ಹಾಕಲಿಲ್ಲ."

ದುಃಖೀರಾಮನು ಸಾಕ್ಷಿ ಹೇಳಲು ಬಂದು ಮೂರ್ಛೆಹೋದನು. ಮೂರ್ಛೆಯಿಂದ ಎಚ್ಚೆತ್ತನಂತರ "ಸಾಹೇಬರೇ, ನಾನು ಕೊಲೆಮಾಡಿದೆನು" ಎಂದನು.

"ಏಕೆ ?"

"ಅನ್ನ ಹಾಕೆಂದೆ-ಹಾಕಲಿಲ್ಲ.?"

ವಿಸ್ತಾರವಾಗಿ ವಿಚಾರಣೆ ನಡೆಸಿ ಇತರ ಹಲವು ಸಾಕ್ಷಿಗಳ ಹೇಳಿಕೆಯನ್ನು ಕೇಳಿ ಜಡ್ಜಿಗಳು ಸ್ಪಷ್ಟವಾಗಿ ತಿಳಿದದ್ದೇನೆಂದರೆ—"ಮನೆಯ ಹೆಂಗಸನ್ನು ಗಲ್ಲಿನ ಅವಮಾನದಿಂದ ಉಳಿಸುವುದಕ್ಕಾಗಿ ಈ ಅಣ್ಣ ತಮ್ಮಂದಿರು ತಪ್ಪನ್ನು ಒಪ್ಪಿಕೊಳ್ಳುತ್ತಿರುವರು. ಆದರೆ ಚಂದಿರೆಯು ಪೋಲೀಸ್ ಠಾಣೆಯಲ್ಲಿ ಕೊಟ್ಟ ಹೇಳಿಕೆಯಿಂದ ಆರಂಭವಾಗಿ ಸೆಷನ್ ಕೋರ್ಟಿನವರೆಗೂ ಒಂದೇ ಮಾತನ್ನು ಹೇಳುತ್ತ ಬಂದಿರುವಳು. ಸ್ವಲ್ಪವೂ ಬದಲಾಯಿಸಿಲ್ಲ. ಇಬ್ಬರು ವಕೀಲರು ತಮ್ಮಿಚ್ಛೆಯಿಂದಲೇ ಮರಣದಂಡನೆಯಿಂದ ಅವಳನ್ನು ಉಳಿಸಬೇಕೆಂದು ಸರ್ವಪ್ರಯತ್ನ ಮಾಡಿ ಕೊನೆಗೆ ಸೋಲನ್ನು ಒಪ್ಪಿಕೊಂಡು ಕುಳಿತರು."

ಅತಿ ಸಣ್ಣ ವಯಸ್ಸಿನಲ್ಲಿ ಕಪ್ಪಗೆ ಕುಳ್ಳಗಿದ್ದ ಹುಡುಗಿಯೊಬ್ಬಳು ಆಟದ ಬೊಂಬೆಯನ್ನು ಕೆಳಗೆಸೆದು ತನ್ನ ದುಂಡನೆಯ ಮುಖದೊಡನೆ ತಂದೆಯ ಮನೆಯಿಂದ ಅತ್ತೆಯ ಮನೆ ಹೊಕ್ಕಳಲ್ಲ ಅಂದಿನ ರಾತ್ರಿಯ ಶುಭಲಗ್ನದ ವೇಳೆಯಲ್ಲಿ ಇಂದಿನ ಘಟನೆಯನ್ನು ಊಹಿಸಲು ಯಾರು ಶಕ್ಯರು. ಬಹುಶಃ ಅವಳ ತಂದೆ ಸಾಯುವ ವೇಳೆಯಲ್ಲಿ 'ಏನಾದರೂ ಆಗಲಿ. ನನ್ನ ಮಗಳಿಗೆ ಒಂದು ದಾರಿ ಮಾಡಿ ನಾನು ಹೋಗುತ್ತಿರುವೆ' ಎಂದು ಹೇಳಿ ನೆಮ್ಮದಿ ಪಡೆದಿರಬೇಕು.

ಜೈಲಿನಲ್ಲಿ ಗಲ್ಲಿಗೆ ಹಾಕುವ ಮುಂಚೆ ದಯಾಳು ಸಿವಿಲ್ ಸರ್ಜನ್ನರು "ಯಾರನ್ನಾದರೂ ನೋಡಬೇಕೆಂಬ ಆಶೆಯಿದೆಯೋ?" ಎಂದು ಚಂದಿರೆಯನ್ನು ಕೇಳಿದರು.

"ಒಂದು ಸಾರಿ ತನ್ನ ತಾಯಿಯನ್ನು ನೋಡಬೇಕೆಂದು ಆಶೆಯಾಗುತ್ತೆ" ಎಂದಳು ಚಂದಿರೆ.

ಡಾಕ್ಟರು—"ನಿನ್ನನ್ನು ನೋಡುವುದಕ್ಕಾಗಿ ನಿನ್ನ ಗಂಡ ಕಾದಿರುವನು. ಅವನನ್ನು ಕರೆಸಬೇಕೋ?" ಎಂದರು.

ಚಂದಿರೆ "ಸಾವು ಬೇಕು" ಎಂದಳು.

---

(ಕ್ರಿ. ಶ. ೧೮೯೩)

# ಒಂದು ಸಣ್ಣ ಪುರಾತನ ಕತೆ

ಕತೆ ಹೇಳಲೇಬೇಕೇ? ಆದರೆಇನ್ನು ಹೇಳಲು ಶಕ್ತನಲ್ಲ. ಈಗ ಈ ದಣಿದ ಅಶಕ್ತ ವ್ಯಕ್ತಿಗೆ ವಿರಾಮ ಕೊಡಬೇಕು.

ಈ ಪದವಿಯನ್ನು ನನಗೆ ಯಾರು ಕೊಟ್ಟರೋ ಹೇಳುವುದು ಕಷ್ಟ. ಮೆಲ್ಲಮೆಲ್ಲನೆ ಒಬ್ಬೊಬ್ಬರಾಗಿ ನೀವುಗಳು ನಾಲ್ಕಾರು ಜನ ಬಂದು ಸುತ್ತಲೂ ಯಾವಾಗ ಕೂಡಿದಿರೋ ಏತಕ್ಕಾಗಿ ನೀವುಗಳು ನನ್ನ ಮೇಲೆ ಇಷ್ಟು ಅನುಗ್ರಹ ತೋರಿಸಿದಿರೋ ನನ್ನಿಂದ ಇಷ್ಟು ಕೆಲಸದ ಆಶೆಯನ್ನಿಟ್ಟರೋ ಅದೆಲ್ಲವನ್ನೂ ಸ್ಪಷ್ಟವಾಗಿ ಹೇಳುವುಮ ನನ್ನಿಂದ ಆಗದ ಕೆಲಸ. ಖಂಡಿತವಾಗಿಯೂ ಅದು ನಿಮ್ಮ ಸದ್ಗುಣದಿಂದ. ಸೌಭಾಗ್ಯದಿಂದ ನನ್ನ ವಿಷಯದಲ್ಲಿ ನಿಮಗೆಲ್ಲ ಅನುಗ್ರಹ ಅಂಕುರಿಸಿತು. ಆ ಅನುಗ್ರಹವನ್ನು- ವನ್ನು ಯಾವ ರೀತಿಯಲ್ಲಿ ಶಾಶ್ವತವಾಗಿ ಇಟ್ಟುಕೊಳ್ಳಬೇಕೋ ಅದಕ್ಕೋಸ್ಕರ ನನ್ನ ಪ್ರಯತ್ನಕ್ಕೆ ಅಭಾವವೇನೂ ಇಲ್ಲ.

ಆದರೆ ಐದು ಜನರ ಅವ್ಯಕ್ತ ಅನಿರ್ದಿಷ್ಟ ಸಮ್ಮತಿಯಿಂದ ಒದಗಿದ ಕೆಲಸದ ಹೊಣೆ ನನ್ನ ಮೇಲೆ ಬಿದ್ದಿದೆಯಲ್ಲಾ ಅದಕ್ಕೆ ನಾನು ಯೋಗ್ಯನಲ್ಲ. ಶಕ್ತಿಯಿದೆಯೋ ಇಲ್ಲವೋ ಎಂಬ ವಿಷಯವನ್ನೆತ್ತಿಕೊಂಡು ವಿನಯವನ್ನಾಗಲೀ ಅಹಂಕಾರವನ್ನಾಗಲೀ ಪ್ರದರ್ಶಿಸುವುದಕ್ಕೆ ಆಶಿಸೆನು. ಆದರೆ ಮುಖ್ಯ ಕಾರಣವೆಂದರೆ ಬ್ರಹ್ಮನು ನನ್ನನ್ನು ನಿರ್ಜನ – ಚರ ಜೀವರೂಪದಲ್ಲಿ ಸೃಷ್ಟಿಸಿದ್ದನು. ಖ್ಯಾತಿ, ಯಶಸ್ಸು ಮತ್ತು ಜನತೆಗೆ ಉಪಯೋಗಿಯಾಗುವಂತೆ ನನ್ನ ಮೈಮೇಲೆ ದಪ್ಪ ಚರ್ಮವನ್ನು ಕೊಡಲಿಲ್ಲ. ಅವನ ಇಚ್ಛೆಯೇನೆಂದರೆ—"ನಿನ್ನ ಆತ್ಮವನ್ನು ರಕ್ಷಿಸಿಕೊಳ್ಳುವ ಆಶೆಯಿದ್ದರೆ ಒಬ್ಬಂಟಿಗನಾಗಿಯೇ ವಾಸಿಸು" ಎಂಬುದೇ. ಮನಸ್ಸು ಆ ಜನಶೂನ್ಯ ವಾಸಸ್ಥಾನಕ್ಕೇ ಸದಾ ಹಾತೊರೆಯುತ್ತಿದೆ. ಆದರೆ ಪಿತಾಮಹ ಅದೃಷ್ಟನು ಪರಿಹಾಸಕ್ಕಾಗಿಯೋ ಅಥವಾ ಮರೆವಿನಿಂದಲೋ ನನ್ನನ್ನು ದೊಡ್ಡವರ ಗುಂಪಿನ ನಡುವೆ ತಳ್ಳಿ ಈಗ ಬಟ್ಟೆಯಿಂದ ಬಾಯಿ ಮುಚ್ಚಿಕೊಂಡು ನಗುತ್ತಿರುವನು. ನಾನೂ ಅವನ ಪರಿಹಾಸ್ಯದಲ್ಲಿ

ಭಾಗವಹಿಸಲು ಯತ್ನಿಸುತ್ತಿರುವೆನು. ಆದರೆ ಸಫಲವಾಗಲು ಯಾವ ರೀತಿಯಲ್ಲೂ ಸಾಧ್ಯವಾಗಿಲ್ಲ.

ಓಡಿಹೋಗುವುದೂ ನನ್ನ ಕರ್ತವ್ಯವೆಂದು ನನಗೆ ಅನಿಸದು. ಸೈನ್ಯ ದಳದ ನಡುವೆ ಸ್ವಭಾವತಃ ಯುದ್ಧಕ್ಕಿಂತ ಹೆಚ್ಚಾಗಿ ಶಾಂತಿಯ ನಡುವೆ ಹೆಚ್ಚು ಚಟುವಟಿಕೆಯುಳ್ಳವರಾಗಿರುವವರೂ ಬಹು ಜನರಿರುವರು. ಆದರೆ ಅವರು ತಮ್ಮ ಮತ್ತು ಇತರರ ತಪ್ಪಿನಿಂದ ಯುದ್ಧಕ್ಷೇತ್ರದ ನಡುವೆ ಬಂದು ನಿಂತವೇಳೆಯಲ್ಲಿ ಹಠಾತ್ತಾಗಿ ದಳವನ್ನು ಬಿಟ್ಟು ಓಡಿ ಹೋಗಲು ಅವರಿಗೆ ತೋರದು. ಅದೃಷ್ಟವು ಚೆನ್ನಾಗಿ ವಿವೇಚನೆಮಾಡಿ ಪ್ರಾಣಿಗಳನ್ನು ಸಾಧ್ಯವಾಗುವ ಕೆಲಸದಲ್ಲಿ ನಿಯೋಗಿಸುವುದಿಲ್ಲ. ಆದರೆ ಹಾಗಿದ್ದರೂ ಒಪ್ಪಿಸಿದ ಕೆಲಸವನ್ನು ನಿಷ್ಠೆಯೊಡನೆ ಪೂರ್ತಿಮಾಡುವ ಹೊಣೆ ಮನುಷ್ಯರ ಕರ್ತವ್ಯ.

ನೀವುಗಳು ನನ್ನ ಬಳಿ ಬಂದು ಕೂಡುವುದು ಅವಶ್ಯಕವೆಂದು ಎಣಿಸಿದಿರಿ. ಮರ್ಯಾದೆ ತೋರಿಸುವುದರಲ್ಲಿಯೂ ಕೃಪಣರಾಗಿರಲಿಲ್ಲ. ಅವಶ್ಯಕತೆ ಕಳೆದನಂತರ ಸೇವಕಾಧಮನ ವಿಷಯದಲ್ಲಿ ಅವಜ್ಞತೆಯನ್ನು ತೋರಿಸಿ ಅಷ್ಟಿಷ್ಟು ಆತ್ಮಗೌರವವನ್ನು ಅನುಭವಿಸುವ ಪ್ರಯತ್ನವನ್ನೂ ಮಾಡಿದಿರಿ; ಪ್ರಪಂಚದಲ್ಲಿ ಇದೇ ಸ್ವಭಾವವಾದುದು. ಆದ್ದರಿಂದ ಈ ಕಾರಣದಿಂದಲೇ 'ಸಾಧಾರಣ' ಎಂಬ ಹೆಸರಿನ ಒಬ್ಬ ಅಕೃತಜ್ಞ, ಅವ್ಯವಸ್ಥಿತ ಚಿತ್ತರಾಜನನ್ನು ಅವನ ಅನುಚರವರ್ಗ ಸಂಪೂರ್ಣವಾಗಿ ನಂಬದು. ಆದರೆ ಅನುಗ್ರಹ ನಿಗ್ರಹದ ಕಡೆಗೆ ದೃಷ್ಟಿಸಿದರೆ ಎಲ್ಲ ಸಮಯದಲ್ಲೂ ಕೆಲಸ ಮಾಡಿಸುವುದು ಸಾಧ್ಯವಿಲ್ಲ. ಅಪೇಕ್ಷೆಯಿಲ್ಲದವರಾಗಿ ಕೆಲಸ ಮಾಡದಿದ್ದರೆ ಕೆಲಸದ ಗೌರವವಿರದು.

ಆದ್ದರಿಂದ ಏನನ್ನಾದರೂ ಕೇಳುವ ಆಶೆಯನ್ನಿಟ್ಟುಕೊಂಡು ಬಂದಿರುವಿರಾದರೆ ಅಷ್ಟಿಷ್ಟು ಹೇಳುವೆನು. ಕೇಳಿರಿ. ದಣಿದೆನೆಂದು ಹೇಳೆನು. ಉತ್ಸಾಹದ ಆಶೆಯನ್ನೂ ಇಡುವುದಿಲ್ಲ.

ಆದರೆ ಇಂದು ಅತಿಕ್ಷುದ್ರ ಮತ್ತು ಪೃಥ್ವಿಯ ಅತ್ಯಂತ ಪುರಾತನ ಕತೆಯೊಂದು ನೆನಪಾಗುವುದು. ಮನೋಹರವಾಗದಿದ್ದರೂ ಸಣ್ಣದಾದ ಕಾರಣ ಕೇಳಲು ಹೆದರಿಕೆಯಾಗುವ ಸಂಭವವಿಲ್ಲ.

ಪೃಥ್ವಿಯ ಒಂದು ಮಹಾನದಿಯ ತೀರದಲ್ಲಿ ಒಂದು ಮಹಾರಣ್ಯ ವಿತ್ತು. ಆ ಅರಣ್ಯ ಮತ್ತು ಆ ನದೀತೀರದಲ್ಲಿ ಒಂದು ಮರಕುಟಿಗನೂ ಒಂದು ಬಾತೂ ವಾಸಿಸುತ್ತಿದ್ದುವು.

ಭೂಮಿಯ ಮೇಲೆ ಹುಳುಗಳು ಸುಲಭವಾಗಿ ಸಿಕ್ಕುತ್ತಿದ್ದಾಗ ಹಸಿವನ್ನು ಕಳೆದುಕೊಳ್ಳುವುದರ ಮೂಲಕ ಸಂತುಷ್ಟಚಿತ್ತದಿಂದ ಇವೆರಡೂ ಭೂಮಿ ಆಕಾಶಗಳ ಯಶೋಗಾನ ಮಾಡುತ್ತ ಕೊಬ್ಬಿದ ಮೈಯೊಡನೆ ವಿಹರಿಸುತ್ತಿದ್ದುವು.

ಕಾಲಕ್ರಮದಲ್ಲಿ ದೈವಯೋಗದಿಂದ ಭೂಮಿಯ ಮೇಲೆ ಹುಳುಗಳು ಸಿಕ್ಕುವುದು ಕಷ್ಟವಾಯಿತು.

ಆಗ ನದೀತೀರದ ಬಾತು ಕೊಂಬೆಯ ಮೇಲಿನ ಮರಕುಟಿಗನೊಡನೆ—'ಮರಕುಟಿಗಣ್ಣಾ, ಮೇಲಿನಿಂದ ಬಹು ಜನರಿಗೆ ಈ ಪೃಥ್ವಿ ನವೀನ, ಶ್ಯಾಮಲ, ಸುಂದರ ಎಂದು ತೋರುವುದು. ಆದರೆ ನನಗೆ ತಿಳಿದಮಟ್ಟಿಗೆ ಇದು ಮೊದಲಿನಿಂದ ಕಡೆಯವರೆಗೆ ಜೀರ್ಣವಾಗಿದೆ' ಎಂದಿತು.

ರೆಂಬೆಯ ಮೇಲಿದ್ದ ಮರುಕುಟಿಗ ನದೀತೀರದಲ್ಲಿದ್ದ ಬಾತಿನೊಡನೆ " ಬಾತಣ್ಣಾ, ಹಲವರು ಈ ಅರಣ್ಯವನ್ನು ತೇಜಸ್ಸಿನಿಂದ ಕೂಡಿ ಸುಂದರವಾದುದೆಂದು ಭಾವಿಸುವರು. ಆದರೆ ಇದು ಸಂಪೂರ್ಣವಾಗಿ ಅಂತಃಸಾರ ವಿಹೀನವಾದುದೆಂದು ನಾನು ದೃಢವಾಗಿ ಹೇಳುವೆನು—" ಎಂದಿತು.

ಆಗ ಎರಡೂ ಕಲೆತು ಆದೇ ರೀತಿ ಪ್ರಮಾಣಿಸಿ ತೋರಿಸಲು ಸಿದ್ಧವಾದುವು. ಬಾತು ನದಿಯ ತೀರದಲ್ಲಿ ಧುಮುಕಿ ಪೃಥ್ವಿಯ ಕೋಮಲ ಕೆಸರಿನಲ್ಲಿ ಅನವರತ ಕೊಕ್ಕನ್ನು ಆಡಿಸುತ್ತ ವಸುಂಧರೆಯ ಜೀರ್ಣತೆಯನ್ನು ತೋರಿಸಿಕೊಡತೊಡಗಿತು. ಮರಕುಟಿಗನು ವನಸ್ಪತಿಯ ಕಠಿಣ ಶಾಖೆಗಳಲ್ಲಿ ಅಡಿಗಡಿಗೆ ಕುಟುಕುತ್ತ ಅರಣ್ಯದ ಅಂತಃಸಾರಶೂನ್ಯತೆಯನ್ನು ಪ್ರಚಾರ ಮಾಡತೊಡಗಿತು.

ವಿಧಿವಿಡಂಬನೆಯಿಂದ ಮೇಲೆ ಹೇಳಿದ ಎರಡು ಚಟುವಟಿಕೆಯಾದ ಪಕ್ಷಿಗಳೂ ಸಂಗೀತವಿದ್ಯೆಯಿಂದ ವಂಚಿತವಾಗಿದ್ದುವು. ಆದಕಾರಣ

ಕೋಗಿಲೆಯು ಭೂಮಿಯ ಮೇಲೆ ನವವಸಂತದ-ಸಮಾಗಮವನ್ನು ಪಂಚಮಸ್ವರದಿಂದ ಘೋಷಣೆಮಾಡಲು ಆರಂಭಿಸಿ ಶ್ಯಾಮಲ ಅರಣ್ಯದಲ್ಲಿ ನವಪ್ರಭಾತದ ಕೀರ್ತನ ಮಾಡುವುದರಲ್ಲಿ ನಿಯುಕ್ತವಾಗಿರಲು, ಆಗಲೂ ಈ ಎರಡು ಹಸಿದ ಅಸಂತುಷ್ಟ ಮೂಕಪಕ್ಷಿಗಳು ಎಡೆಬಿಡದೆ ಉತ್ಸಾಹದಿಂದ ತಮ್ಮ ಪ್ರತಿಜ್ಞೆಯನ್ನು ಪಾಲಿಸುವುದರಲ್ಲಿ ನಿರತವಾಗಿದ್ದುವು.

ಈ ಕತೆ ನಿಮಗೆ ಚೆನ್ನಾಗಿದೆಯೆಂದು ತೋರುವುದಿಲ್ಲವಲ್ಲವೆ ? ಚೆನ್ನಾಗಿ ತೋರುವ ಕತೆಯೂ ಅಲ್ಲ. ಆದರೆ ಇದರಲ್ಲಿರುವ ಎಲ್ಲಕ್ಕಿಂತ ವಿಶೇಷವಾದ ಗುಣವೆಂದರೆ ಐದಾರು ಪ್ಯಾರಾಗಳಲ್ಲಿ ಮುಗಿಯುವುದೇ.

ಈ ಕತೆ ಹಳೆಯದೆಂಬುದೂ ಕೂಡ ನಿಮ್ಮ ಮನಸ್ಸಿಗೆ ತೋರುವುದಿಲ್ಲ, ಅಲ್ಲವೇ ? ಅದಕ್ಕೆ ಕಾರಣ ಪೃಥ್ವಿಯ ಭಾಗ್ಯದೋಷದಿಂದ ಇದು ಅತಿ ಪುರಾತನ ಕತೆಯಾದರೂ ಚಿರಕಾಲ ನೂತನವಾಗಿಯೇ ಇದೆ. ಬಹು ದಿನಗಳಿಂದಲೂ ಕೃತಜ್ಞತಾಹೀನ ಮರುಕುಟಿಗನು ಪೃಥ್ವಿಯ ದೃಢ ಕಠಿಣ ಅಮರ ಮಹತ್ವದ ಠಕ ಠಕ್ ಶಬ್ದದೊಡನೆ ಕೊಕ್ಕನ್ನು ಕುಟುಗುತ್ತಾ ಬಂದಿದೆ ; ಮತ್ತು ಬಾತು ಪೃಥ್ವಿಯ ಸರಸ, ಉರ್ವರ ಕೋಮಲತ್ವದ ನಡುವೆ ಖಚ್ ಖಚ್ ಶಬ್ದದೊಡನೆ ಕೊಕ್ಕನ್ನು ಓಡಿಸುತ್ತಿದೆ. ಇಂದಿಗೂ ಈ ಪದ್ಧತಿ ತಪ್ಪಿಲ್ಲ. ಅವುಗಳ ಮನಸ್ಸಿನ ಆಕ್ಷೇಪಣೆ ಇನ್ನೂ ಉಳಿದೇ ಇದೆ.

ಕತೆಯೊಳಗೆ ಸುಖದುಃಖದ ವಿಷಯವೇನಾದರೂ ಇದೆಯೆಂದು ಕೇಳುವಿರೇನು ? ಇದರಲ್ಲಿ ದುಃಖದ ಸಂಗತಿಯೂ ಇದೆ ; ಸುಖದ ಸಂಗತಿಯೂ ಇದೆ. ದುಃಖದ ಕತೆಯೇನೆಂದರೆ—ಪೃಥ್ವಿ ಎಷ್ಟೇ ಉದಾರವಾಗಿರಲಿ, ಅರಣ್ಯ ಎಷ್ಟೇ ಮಹತ್ವವುಳ್ಳದಾಗಿರಲಿ ಕ್ಷುದ್ರವಾದ ಕಣ್ಣುಗಳು ತಮಗೆ ಉಪಯುಕ್ತವಾದ ತಿನಿಸನ್ನು ಹೊಂದದೇ ಹೋದ ಮಾತ್ರಕ್ಕೆ ಅವನ್ನು ಹೊಡೆಯುತ್ತ ಬಂದಿರುವುದೇ. ಸುಖದ ಹಾಗೂ ಸಂತೋಷದ ವಿಷಯವೇನೆಂದರೆ ಹೀಗಿದ್ದರೂ ಕೂಡ ನೂರಾರು, ಸಾವಿರಾರು ವರ್ಷಗಳಿಂದಲೂ ಪೃಥ್ವಿಯ ನವೀನತೆಯೂ ಅರಣ್ಯದ ಶ್ಯಾಮಲತೆಯೂ ಹಾಗೆಯೇ ಇದೆ. ಒಂದು ವೇಳೆ ಯಾರಾದರೂ ಸಾಯುವುದಾದರೆ ಅವು ಆ ವಿದ್ವೇಷ-ವಿಷ

ದಿಂದ ಜರ್ಝರಿತವಾದ ನಿರ್ಭಾಗ್ಯ ಪಕ್ಷಿಗಳೇ. ಮತ್ತೆ ಪ್ರಪಂಚದಲ್ಲಿ ಯಾರಿಗೂ ಆ ಸುದ್ದಿ ತಿಳಿಯುವುದೂ ಸಾಧ್ಯವಿಲ್ಲ.

ನೀವುಗಳು ಈ ಕತೆಯ ರುಂಡ ಮುಂಡ ಅರ್ಥ ಏನು ಎಂಬುದನ್ನು ತಿಳಿಯಲಾರಿರಿ. ಆದರೆ ತಾತ್ಪರ್ಯ ವಿಶೇಷವಾಗಿ ಏನೂ ಜಟಿಲವಾಗಿಲ್ಲ. ಸ್ವಲ್ಪ ವಯಸ್ಸಾಯಿತೆಂದರೆ ತಿಳಿದುಕೊಳ್ಳುವಿರಿ.

ಏನಾದರಾಗಲಿ—ಎಲ್ಲ ವಿಧಗಳಲ್ಲೂ ಶುದ್ಧವಾಗಿರುವ ವಸ್ತುವು ನಿಮಗೆ ಉಪಯುಕ್ತವಾಗುವಂತೆ ಸೃಷ್ಟಿಯಾಗಿಲ್ಲ. ಅದಕ್ಕಂತೂ ಯಾವ ಸಂದೇಹವೂ ಇಲ್ಲ.

---

(ಕ್ರಿ. ಶ. ೧೮೯೨)

# ಉದ್ಧಾರ

ಗೌರಿ ಪ್ರಾಚೀನ ಧನಿಕರ ವಂಶದಲ್ಲಿ ಅತ್ಯಾದರದಿಂದ ·ಬೆಳೆದ ಹೆಣ್ಣು. ಗಂಡ ಪರೇಶನು ಬಡತನದ ಹೀನಸ್ಥಿತಿಯನ್ನು ತೊಲಗಿಸಿ ಈಗೀಗ ಸ್ವಪ್ರಯತ್ನದಿಂದಲೇ ತಕ್ಕಮಟ್ಟಿಗೆ ಅನುಕೂಲಸ್ಥನಾಗಿದ್ದ. ಅವನು ಬಡವನಾಗಿದ್ದವರೆಗೂ ಮಗಳಿಗೆ ಕಷ್ಟವಾದೀತೆಂದು ಹೆದರಿ ಅವನ ಅತ್ತೆ ಮಾವಂದಿರು ಅವಳನ್ನು ಅವನ ಮನೆಗೆ ಕಳುಹಿಸಿಕೊಡಲಿಲ್ಲ. ಗೌರಿ ಸುಮಾರಾಗಿ ವಯಸ್ಕಳಾದ ನಂತರವೇ ಗಂಡನ ಮನೆಗೆ ಬಂದಿದ್ದಳು.

ಈ ಎಲ್ಲ ಕಾರಣಗಳಿಂದಲೇ ಪರೇಶನು, ಸುಂದರಿಯೂ, ಯುವತಿಯೂ ಆದ ಹೆಂಡತಿ ಸಂಪೂರ್ಣವಾಗಿ ತನ್ನ ಅಧಿಕಾರಕ್ಕೆ ಒಳಪಡುವವಳಲ್ಲವೆಂದು ತಿಳಿದಿರಬೇಕು, ಮತ್ತು ಸಂದೇಹಪಡುವ ಪ್ರಕೃತಿಯು ಅವನಿಗೆ ಅಂಟಿಕೊಂಡಿದ್ದ ವ್ಯಾಧಿಗಳಲ್ಲೊಂದೆಂದು ನನ್ನ ಎಣಿಕೆ.

ಪರೇಶ ಪಶ್ಚಿಮದ* ಒಂದು ಸಣ್ಣ ಪಟ್ಟಣದಲ್ಲಿ ವಕೀಲೀ ವೃತ್ತಿಯಲ್ಲಿದ್ದನು. ಮನೆಯಲ್ಲಿ ಆತ್ಮೀಯರು ಸ್ವಜನರು ಯಾರೂ ಇರಲಿಲ್ಲ. ಒಬ್ಬಂಟಿಗಳಾದ ಹೆಂಡತಿಯ ವಿಷಯವಾಗಿ ಅವನ ಚಿತ್ತ ತಳಮಳಗುಟ್ಟುತ್ತಿತ್ತು. ನಡುನಡುವೆ ಒಂದೊಂದು ದಿನ ಅಕಸ್ಮಾತ್ತಾಗಿ ಅವೇಳೆಯಲ್ಲಿ ಅವನು ಕಛೇರಿಯಿಂದ ಮನೆಗೆ ಬಂದು ನಿಲ್ಲುತ್ತಿದ್ದನು. ಮೊದಮೊದಲಲ್ಲ ಗಂಡನ ಈ ತರಹದ ಆಕಸ್ಮಿಕ ಆಗಮನದ ಕಾರಣವನ್ನು ಗೌರಿ ಸರಿಯಾಗಿ ತಿಳಿದುಕೊಳ್ಳಲಿಲ್ಲ.

ಆಗಾಗ್ಗೆ ಪರೇಶನು ಕಾರಣವಿಲ್ಲದೆಯೇ ಒಬ್ಬೊಬ್ಬ ಆಳನ್ನು ಕೆಲಸದಿಂದ ಬಿಡಿಸುತ್ತಿದ್ದನು. ಯಾವ ಆಳೂ ಅವನಿಗೆ ಹೆಚ್ಚುಕಾಲ ತೃಪ್ತಿಯನ್ನುಂಟುಮಾಡುತ್ತಿರಲಿಲ್ಲ. ಮುಖ್ಯವಾಗಿ ಕೆಲಸಕ್ಕೆ ಕಷ್ಟವಾದೀತೆಂದು ಯಾವ ಆಳನ್ನಾದರೂ ಇಟ್ಟುಕೊಳ್ಳಬೇಕೆಂದು ಗೌರಿ ಒತ್ತಾಯ

---

*ಬಂಗಾಲಿಗಳು ಬಿಹಾರದಿಂದ ಪಶ್ಚಿಮಕ್ಕಿರುವ ಉತ್ತರ ಇಂಡಿಯದ ಭಾಗವನ್ನು ನಿರ್ದೇಶಿಸುವಾಗ 'ಪಶ್ಚಿಮ' ಎನ್ನುವರು

ಮಾಡಿದರೆ ಪರೇಶ ಅವನನ್ನು ಒಂದು ಘಳಿಗೆಯೂ ಮನೆಯಲ್ಲಿ ಇರಗೊಡುತ್ತಿರಲಿಲ್ಲ. ತೇಜಸ್ವಿನಿಯಾದ ಗೌರಿ ಗಂಡನ ಈ ನಡವಳಿಕೆಯಿಂದ ನೊಂದುಕೊಂಡಷ್ಟೂ ಅವನು ಅಸ್ಥಿರನಾಗುತ್ತಿದ್ದನು. ಒಮ್ಮೊಮ್ಮೆ ಇನ್ನೂ ವಿಲಕ್ಷಣವಾಗಿ ನಡೆದುಕೊಳ್ಳುತ್ತಿದ್ದನು.

ಕೊನೆಗೆ ಮನಸ್ಸನ್ನು ಬಿಗಿ ಹಿಡಿಯಲಾರದೆ ಕೆಲಸದವಳನ್ನು ಗುಟ್ಟಾಗಿ ಕರೆದು ಪರೇಶನು ನಾನಾವಿಧವಾದ ಸಂದೇಹಗಳ ಚರ್ಚೆಯನ್ನು ಮಾಡುತ್ತಿದ್ದ ವಿಷಯವೆಲ್ಲ ಗೌರಿಯ ಕಿವಿಗೆ ಬೀಳತೊಡಗಿತು. ಆತ್ಮಾಭಿಮಾನೀ ಮಿತಭಾಷಿಣೀ ನಾರಿಯು ಅವಮಾನದಿಂದ ಗಾಯಗೊಂಡ ಹೆಣ್ಣು ಸಿಂಹದಂತೆ ಒಳಗೊಳಗೆ ಉದ್ದೀಪ್ತಳಾಗತೊಡಗಿದಳು. ಈ ಹುಚ್ಚು ಸಂದೇಹ ದಂಪತಿಗಳ ನಡುವೆ ಪ್ರಲಯ ಖಡ್ಗದಂತೆ ನಿಂತು ಉಭಯರನ್ನೂ ಸಂಪೂರ್ಣವಾಗಿ ವಿಚ್ಛೇದ ಮಾಡತೊಡಗಿತು.

ಗೌರಿಯ ಹತ್ತಿರ ಅವನ ತೀವ್ರ ಸಂದೇಹವು ಪ್ರಕಟವಾಗಿ ನಾಚಿಕೆಬಿಟ್ಟುಹೋಗಲು ಪರೇಶನು ನಿತ್ಯವೂ ಪದೇ ಪದೇ ಸಂದೇಹ ವ್ಯಕ್ತಗೊಳಿಸಿ ಹೆಂಡತಿಯೊಡನೆ ಜಗಳವಾಡಲಾರಂಭಿಸಿದನು. ಗೌರಿ ಎಷ್ಟೆಷ್ಟು ನಿರುತ್ತರ ಅವಜ್ಞತೆಯ ಮೂಲಕವೂ ತೀಕ್ಷ್ಣ ಕಟಾಕ್ಷದ ಮೂಲಕವೂ ಅವನನ್ನು ತಲೆಯಿಂದ ಕಾಲಿನವರೆಗೆ ತುಂಡು ತುಂಡಾಗಿ ಕತ್ತರಿಸತೊಡಗಿದಳೋ ಅವನ ಸಂದೇಹ ಹುಚ್ಚಾಟ ಅಷ್ಟಷ್ಟೂ ಹೆಚ್ಚು ಮುಂದುವರಿಯುತ್ತಿತ್ತು.

ಈ ರೀತಿಯಲ್ಲಿ ಸ್ವಾಮಿಸುಖದಿಂದ ವಂಚಿತಳಾಗಿ ಆ ಪುತ್ರಹೀನ ತರುಣಿ ಧಾರ್ಮಿಕ ನಡವಳಿಕೆಯ ಕಡೆಗೆ ಮನಸ್ಸಿಟ್ಟಳು. ಹರಿಸಭೆಯ ನೂತನ ಪ್ರಚಾರಕ ಬ್ರಹ್ಮಚಾರೀ ಪರಮಾನಂದನನ್ನು ಕರೆದು ಮಂತ್ರೋಪದೇಶ ಪಡೆದಳು. ಮತ್ತು ಅವನ ಬಳಿ ಭಾಗವತವ್ಯಾಖ್ಯಾನ ಕೇಳಲು ಆರಂಭಿಸಿದಳು. ಸ್ತ್ರೀ ಹೃದಯದ ಎಲ್ಲ ವ್ಯರ್ಥ ಸ್ನೇಹವೂ ಭಕ್ತಿಯ ಆಕಾರದಲ್ಲಿ ಒಟ್ಟುಗೂಡಿ ಗುರುದೇವನ ಪದತಲದಲ್ಲಿ ಸಮರ್ಪಿತವಾಯಿತು.

ಪರಮಾನಂದನ ಸಚ್ಚರಿತ್ರೆಯ ವಿಷಯವಾಗಿ ದೇಶ ವಿದೇಶಗಳಲ್ಲಿ ಯಾರ ಮನಸ್ಸಿನಲ್ಲೂ ಲೇಶಮಾತ್ರವೂ ಸಂದೇಹವಿರಲಿಲ್ಲ. ಎಲ್ಲರೂ

ಅವನನ್ನು ಪೂಜಿಸುತ್ತಿದ್ದರು. ಪರೇಶನು ಈ ವಿಷಯದಲ್ಲಿ ಬಾಯಿ ತೆರೆದು ಬಹಿರಂಗವಾಗಿ ಸಂಶಯವನ್ನು ಪ್ರಕಾಶಗೊಳಿಸಲಾರದವನಾಗಿದ್ದನೆಂದೇ ಅದು ಗುಪ್ತವಾದ ಗಾಯವಾಗಿ ಕ್ರಮೇಣ ಅವನ ಹೃದಯವನ್ನು ಕೊರೆಯುತ್ತಿತ್ತು.

ಒಂದು ದಿನ ಸಾಮಾನ್ಯ ಕಾರಣದಿಂದ ವಿಷ ಉತ್ಪತ್ತಿಯಾಯಿತು. ಹೆಂಡತಿಯ ಹತ್ತಿರ ಪರಮಾನಂದನ ಹೆಸರು ಹೇಳಿ ದುರಾಚಾರಿ, ಭಂಡ ಎಂದು ಬೈದು "ನೀನು ಸಾಲಿಗ್ರಾಮವನ್ನು ಹಿಡಿದುಕೊಂಡು ಆ ಬಲ ಧಾರ್ಮಿಕನನ್ನು ಮನಸ್ಸಿನಲ್ಲಿ ಪ್ರೀತಿಸುತ್ತಿಲ್ಲವೆಂದು ಪ್ರಮಾಣಮಾಡು ನೋಡೋಣ ಎಂದು ಪರೇಶ ಕೇಳಿದನು.

ತುಳಿತಕ್ಕೆ ಸಿಕ್ಕಿದ ಹೆಣ್ಣು ಹಾವಿನಂತೆ ಕ್ಷಣಮಾತ್ರದಲ್ಲಿ ಕೆರಳಿ ನಿಂತು ಸುಳ್ಳು ಜಂಭದ ಮೂಲಕ ಗಂಡನ ಮೈ ಉರಿಸಬೇಕೆಂದು ಗೌರಿ ರುದ್ಧ ಕಂಠದೊಡನೆ—"ಪ್ರೀತಿಸುತ್ತೇನೆ. ನೀವು ಏನು ಮಾಡಬೇಕೆನ್ನುವಿರೋ ಮಾಡಿರಿ!" ಎಂದಳು. ಪರೇಶ ತಕ್ಷಣ ಅವಳನ್ನು ಕೊಟಡಿಯಲ್ಲಿ ಕೂಡಿ ಬೀಗ ಹಾಕಿಕೊಂಡು ಕಛೇರಿಗೆ ಹೊರಟುಹೋದನು.

ಅಸಹನೀಯ ರೋಷದಿಂದ ಗೌರಿ ಯಾವ ರೀತಿಯಲ್ಲೋ ಬಾಗಿಲು ತೆಗೆಸಿಕೊಂಡು ತಕ್ಷಣ ಮನೆ ಬಿಟ್ಟು ಹೊರಟುಹೋದಳು.

ಪರಮಾನಂದನು ನಿಶ್ಶಬ್ದವಾದ ಮನೆಯಲ್ಲಿ ಜನಹೀನ ಮಧ್ಯಾಹ್ನದ ಸಮಯದಲ್ಲಿ ಶಾಸ್ತ್ರಾಧ್ಯಯನ ಮಾಡುತ್ತಿದ್ದನು. ಬ್ರಹ್ಮಚಾರಿಯ ಶಾಸ್ತ್ರಾಧ್ಯಯನದ ನಡುವೆ ಅಮೋಘವಾಹಿನೀ ವಿದ್ಯುಲ್ಲತೆಯಿಂದ ಗೌರಿ ಅಡ್ಡ ಬಂದಳು.

"ಇದೇನಿದು?" ಎಂದು ಗುರು ಪ್ರಶ್ನಿಸಿದನು.

ಶಿಷ್ಯಳು—"ಗುರುದೇವ, ಅಪಮಾನಿತ ಸಂಸಾರದಿಂದ ನನ್ನನ್ನು ಉದ್ಧಾರಮಾಡಿ ಕರೆದುಕೊಂಡು ಹೋಗಿರಿ. ನಿಮ್ಮ ಸೇವಾವ್ರತದಲ್ಲೇ ನನ್ನ ಜೀವಮಾನ ಕಳೆಯುವೆನು—" ಎಂದಳು.

ಪರಮಾನಂದನು ಕಠಿಣವಾಗಿ ಗದರಿಸಿ ಗೌರಿಯನ್ನು ಮನೆಗೆ ಹಿಂದಿರುಗಿಸಿದನು. ಆದರೆ 'ಅಯ್ಯೋ ಗುರುವೇ—ಅಂದಿನ ಆ ಛಿನ್ನವಾದ ಶಾಸ್ತ್ರಾಧ್ಯಯನದ ಸೂತ್ರವನ್ನು ಮತ್ತೆ ಮೊದಲಿನಂತೆ ಗಂಟು ಹಾಕುವುದು

ಸಾಧ್ಯವೇ?'—ಪರೇಶ ಮನೆಗೆ ಬಂದು ತೆರೆದ ಬಾಗಿಲನ್ನು ಕಂಡು 'ಇಲ್ಲಿಗೆ ಯಾರು ಬಂದಿದ್ದರು' ಎಂದು ಹೆಂಡತಿಯನ್ನು ಪ್ರಶ್ನಿಸಿದನು.

"ಯಾರೂ ಬಂದಿರಲಿಲ್ಲ. ನಾನೇ ಗುರುಗಳ ಬಳಿಗೆ ಹೋಗಿದ್ದೆನು" ಪರೇಶನ ಮುಖ ಎವೆಯಿಕ್ಕುವಷ್ಟು ಹೊತ್ತು ಬಿಳುಪೇರಿ ತಕ್ಷಣ ರಕ್ತ ವರ್ಣವಾಯಿತು. 'ಏತಕ್ಕೆ ಹೋಗಿದ್ದೆ' ಎಂದು ಕೇಳಿದನು.

ಗೌರಿಯು—"ನನ್ನಿಷ್ಟ" ಎಂದಳು.

ಅಂದಿನಿಂದ ಹೆಂಡತಿಯನ್ನು ಕೊಟಡಿಯಲ್ಲಿ ಕೂಡಿಟ್ಟು ಕಾವಲಿಟ್ಟು ಪರೇಶ ಅವಳಿಗೆ ಕೊಡಲಾರಂಭಿಸಿದ ಚಿತ್ರಹಿಂಸೆಯಿಂದ ಊರಿನಲ್ಲೆಲ್ಲಾ ಅವನಿಗೆ ಕೆಟ್ಟಹೆಸರಾಯಿತು.

ಈ ಎಲ್ಲ ಕುತ್ಸಿತ ಅವಮಾನ ಮತ್ತು ಅತ್ಯಾಚಾರಗಳ ಸಂವಾದ ದಿಂದ ಪರಮಾನಂದನ ಹರಿಚಿಂತೆ ದೂರವಾಯಿತು. ಶೀಘ್ರದಲ್ಲಿ ಆ ಊರನ್ನು ತ್ಯಜಿಸಿ ಹೊರಟುಹೋಗುವುದು ಅವಶ್ಯಕವೆಂದು ಅವನಿಗೆ ತೋರಿತು. ಆದರೆ ಸಂಕಟದಲ್ಲಿ ಸಿಕ್ಕಿರುವವಳನ್ನು ಕೈಬಿಟ್ಟು ದೂರ ಹೋಗಲು ಯಾವ ರೀತಿಯಲ್ಲೂ ಮನಸ್ಸು ಒಪ್ಪಲಿಲ್ಲ. ಸನ್ಯಾಸಿಯ ಈ ಕೆಲವು ದಿನಗಳ ರಾತ್ರಿ ಹಗಲಿನ ಚರಿತ್ರೆಯನ್ನು ಭಗವಂತನೇ ಬಲ್ಲ.

ಕೊನೆಗೆ ಒಂದು ದಿನ ಬಂಧನದಲ್ಲಿರುವಂತೆಯೇ ಗೌರಿಗೆ ಒಂದು ಕಾಗದ ತಲಪಿತು. ಅದರಲ್ಲಿ ಹೀಗೆ ಬರೆದಿತ್ತು—'ವತ್ಸೇ, ಯೋಚಿಸಿ ನೋಡಿದೆನು. ಇದುವರೆಗೆ ಹಲವು ಜನ ಸಾಧ್ವೀ ಸಾಧಕ ರಮಣಿಯರು ಕೃಷ್ಣಪ್ರೇಮದಿಂದ ಸಂಸಾರವನ್ನು ತ್ಯಜಿಸಿರುವರು. ಸಂಸಾರದ ಅತ್ಯಾ ಚಾರದಿಂದ ನಿನ್ನ ಚಿತ್ತವು ಹರಿಪಾದಪದ್ಮಗಳಲ್ಲಿ ನೆಲಸಿದ್ದುದಾದರೆ ತಿಳಿಸು. ಭಗವಂತನ ಸಹಾಯದಿಂದ ಅವನ ಸೇವಕಳನ್ನು ಉದ್ಧಾರಮಾಡಿ ಪ್ರಭು ವಿನ ಅಭಯ ಪಾದಾರವಿಂದಗಳಲ್ಲಿ ಅರ್ಪಿಸಲು ಯತ್ನಿಸುವೆನು. ಫಾಲ್ಗುಣ ಬಹುಳ ಏಕಾದಶಿ ಬುಧವಾರ ಮಧ್ಯಾಹ್ನ ಎರಡು ಘಂಟೆಯ ಹೊತ್ತಿಗೆ ಇಚ್ಛೆಯಿದ್ದರೆ ನಿಮ್ಮ ಮನೆಯ ಸಮೀಪದ ಪುಷ್ಕರಣಿಯ ತೀರದಲ್ಲಿ ನನ್ನನ್ನು ಭೇಟಿ ಮಾಡಬಹುದು.—"

ಗೌರಿ ಕಾಗದವನ್ನು ತಲೆಯ ಕೂದಲಲ್ಲಿ ಹೆರಳಿನ ನಡುವೆ ಮುಚ್ಚಿಟ್ಟಿದ್ದಳು. ಏಕಾದಶಿಯ ಮಧ್ಯಾಹ್ನ ಸ್ನಾನಕ್ಕೆ ಮುಂಚೆ ತಲೆಗೂದಲನ್ನು ಬಿಚ್ಚುವ ಸಮಯದಲ್ಲಿ ನೋಡಿದರೆ ಕಾಗದ ಇರಲಿಲ್ಲ. ಅದು ಯಾವಾಗಲೋ ಹಾಸಿಗೆಯ ಬಳಿ ಬಿದ್ದುಹೋಗಿ ತನ್ನ ಗಂಡನ ಕೈಗೆ ಸಿಕ್ಕಿದೆಯೆಂಬ ಸಂದೇಹವಾಯಿತು. ಗಂಡ ಆ ಕಾಗದವನ್ನು ಓದಿ ಹೊಟ್ಟೆಕಿಚ್ಚಿನಿಂದ ಉರಿದು ಹೋಗುವನೆಂದು ಗೌರಿಗೆ ಒಳಗೊಳಗೆ ಒಂದು ವಿಧವಾದ ಜ್ವಾಲಾಮಯ ಆನಂದ ಉಂಟಾಗತೊಡಗಿತು. ಆದರೆ ಅವಳ ತಲೆಯನ್ನಲಂಕರಿಸಿದ್ದ ಕಾಗದ ಪಾಷಂಡನ ಹಸ್ತಸ್ಪರ್ಶದಿಂದ ಅಪವಿತ್ರವಾಗಿದೆಯೆಂಬ ಸಂಗತಿ ಅವಳಿಗೆ ಅಸಹ್ಯವನ್ನುಂಟುಮಾಡಿತು. ವೇಗವಾಗಿ ನಡೆದು ಗಂಡನ ಕೊಟಡಿಗೆ ಹೋದಳು.

ಗಂಡ ಭೂಮಿಯ ಮೇಲೆ ಬಿದ್ದು ಗೊರ್ ಗೊರ್ ಎನ್ನುತ್ತ ಹೊರಳುತ್ತಿದ್ದುದನ್ನು ಕಂಡಳು. ಅವನ ಬಾಯಿಂದ ನೊರೆ ಹೊರಡುತ್ತಿತ್ತು. ಕಣ್ಣುಗುಡ್ಡೆಗಳು ಮೇಲಕ್ಕೆ ಸಿಕ್ಕಿಕೊಂಡಿದ್ದುವು. ಬಲಗೈಯ ಮುಷ್ಟಿಯಲ್ಲಿ ಭದ್ರವಾಗಿ ಹಿಡಿದುಕೊಂಡಿದ್ದ ಕಾಗದವನ್ನು ಬಿಡಿಸಿಕೊಂಡು ಅವಸರವಾಗಿ ಡಾಕ್ಟರನ್ನು ಕರೆಸಿದಳು.

ಡಾಕ್ಟರು ಬಂದು—'ಅಪೋಪ್ಲೆಕ್ಸಿಯಾ ಆಗಿದೆ' ಎಂದರು. ಆವೇಳೆಗೆ ರೋಗಿಯ ಪ್ರಾಣ ಹೋಯಿತು. ಅಂದೇ ಹೊರ ಊರಿನಲ್ಲಿ ಪರೇಶನು ಒಂದು ಮುಖ್ಯವಾದ ವ್ಯಾಜ್ಯದಲ್ಲಿ ವಾದಿಸಬೇಕಾಗಿತ್ತು. ಸನ್ಯಾಸಿಯ ಅಧಃಪತನವು ಎಷ್ಟು ದೂರ ಮುಂದುವರಿದಿತ್ತೆಂದರೆ ಅವನು ಈ ಸುದ್ದಿಯನ್ನು ಕೇಳಿ ಗೌರಿಯನ್ನು ಕಂಡು ಮಾತನಾಡಿಸಲು ಸಿದ್ಧನಾಗಿದ್ದನು.

ಗುರುದೇವನು ಕಳ್ಳನಂತೆ ಪುಷ್ಕರಿಣಿಯ ಬಳಿ ನಿಂತಿದ್ದುದನ್ನು ಸದ್ಯ ವಿಧವೆ ಗೌರಿ ಕಿಟಕಿಯ ಮೂಲಕ ಕಂಡು ತಕ್ಷಣ ಮಿಂಚು ಬಡಿದವಳಂತೆ ದೃಷ್ಟಿಯನ್ನು ನೆಲಕ್ಕೆ ತಗ್ಗಿಸಿದಳು. ಗುರು ಎಂತಹ ಉಚ್ಚಸ್ಥಾನದಿಂದ ಎಷ್ಟರಮಟ್ಟಿಗೆ ಕೆಳಗೆ ಬಿದ್ದಿರುವನೆಂಬುದನ್ನು ಆಕೆ ತಿಳಿದಳು. ಅವಳ ಹೃದಯದಲ್ಲಿ ಮಿಂಚಿನ ಪ್ರಕಾಶದಿಂದ ತಿಳುವಳಿಕೆಯುಂಟಾಯಿತು.

ಗುರುವು 'ಗೌರಿ' ಎಂದು ಕೂಗಿದನು.

'ಬಂದೆ ಸ್ವಾಮಿ' ಎಂದು ಅವಳು ಉತ್ತರಕೊಟ್ಟಳು.

ಮರಣದ ಸುದ್ದಿಯನ್ನು ಕೇಳಿ ದಹನಕ್ರಿಯಾದಿಗಳಿಗಾಗಿ ಪರೇಶನ ನೆಂಟರು ಬಂದು ತಲುಪಿದಾಗ ಗೌರಿಯ ಮೃತದೇಹ ಗಂಡನ ಮಗ್ಗುಲಲ್ಲಿ ಬಿದ್ದಿದ್ದುದನ್ನು ಕಂಡರು. ಅವಳು ವಿಷ ಕುಡಿದು ಸತ್ತಿದ್ದಳು. ಈ ಕಾಲದಲ್ಲಿ ಈ ಆಶ್ಚರ್ಯಕರವಾದ ಸಹಮರಣದ ದೃಷ್ಟಾಂತದ ಈ ಪಾತಿವ್ರತ್ಯ ಮಹಾತ್ಮ್ಯೆಯಿಂದ ಎಲ್ಲರೂ ಸ್ತಂಭಿತರಾದರು.

---

(ಕ್ರಿ. ಶ. ೧೯೦೦)

# ಅಂಗಳ ಮತ್ತು ಅಂತಃಪುರ

ಬಿಪಿನ್‌ಕಿಶೋರ ಹಣವಂತರ ಮನೆಯಲ್ಲಿ ಜನ್ಮವೆತ್ತಿದ್ದನು. ಅದ ರಿಂದಲೇ ಹಣವನ್ನು ಯಾವ ಪ್ರಮಾಣದಲ್ಲಿ ವ್ಯಯಮಾಡುವುದನ್ನು ತಿಳಿದಿದ್ದನೋ ಅದರಲ್ಲಿ ಅರ್ಧ ಅಳತೆಯಷ್ಟು ಸಂಪಾದಿಸುವುದನ್ನು ಕಲಿತಿರಲಿಲ್ಲ. ಜನ್ಮವೆತ್ತಿದ ಮನೆಯಲ್ಲಿ ಹೆಚ್ಚು ಕಾಲ ವಾಸಿಸುವುದು ಸುತರಾಂ ಸಾಧ್ಯವಿಲ್ಲವಾಯಿತು.

ಸುಂದರ ಸುಕುಮಾರ ಮೂರ್ತಿ, ತರುಣ ಯುವಕ, ಗಾಯನ-ವಾದನಗಳಲ್ಲಿ ಸಿದ್ಧಹಸ್ತ, ಕೆಲಸ ಕಾರ್ಯಗಳಲ್ಲಿ ಹದಿನಾರಾಣೆ ಅಪಟು—ಜಗತ್ತಿನ ದೃಷ್ಟಿಯಿಂದ ಸಂಪೂರ್ಣ ಅನಾವಶ್ಯಕ-ಮತ್ತು ಜೀವನ ಯಾತ್ರೆಯ ವಿಷಯದಲ್ಲಿ ಜಗನ್ನಾಥಸ್ವಾಮಿಯ ರಥದಂತೆ ಅಚಲ—ಯಾವ ಧೋರಣೆಯಿಂದ ಇದುವರೆಗೂ ಸಂಸಾರ ನಡೆಯಿತೋ ಆ ರೀತಿ ಮುಂದೆ ಅದನ್ನು ನಡೆಸುವುದು ಅವನ ಶಕ್ತಿಗೆ ಮೀರಿದ ವಿಷಯವಾಯಿತು.

ಅದೃಷ್ಟವಶಾತ್ ರಾಜಾ ಚಿತ್ತರಂಜನನು ಕೋರ್ಟ್-ಆಫ್-ವಾರ್ಡ್ಸ್* ನಿಂದ ಆಸ್ತಿ ಪಡೆದು ಅಮೆಚೂರ್ ನಾಟಕಮಂಡಲಿಯನ್ನು ಸ್ಥಾಪಿಸುವ ಯತ್ನದಲ್ಲಿದ್ದನು. ಬಿಪಿನಕಿಶೋರನ ಸುಂದರ ಮುಖ, ಹಾಡುವ ಮತ್ತು ಹಾಡುಗಳನ್ನು ರಚಿಸಬಲ್ಲ ಶಕ್ತಿ ನೋಡಿ ಮುಗ್ಧನಾಗಿ ಅವನನ್ನು ಆದರದೊಡನೆ ತನ್ನ ಅನುಚರರ ಶ್ರೇಣಿಯಲ್ಲಿ ಸೇರಿಸಿಕೊಂಡನು.

ರಾಜ ಬಿ. ಎ. ಪಾಸ್ ಮಾಡಿದ್ದನು. ಅವನಲ್ಲಿ ಯಾವ ತರಹದ ಉಚ್ಛೃಂಖತೆಯೂ ಇರಲಿಲ್ಲ. ದೊಡ್ಡ ಮನುಷ್ಯರ ಮಗನಾಗಿದ್ದರೂ

---

* (Court of Wards) ಕೋರ್ಟ್-ಆಫ್-ವಾರ್ಡ್ಸ್: ಹಣವಂತರು ಮೃತರಾಗಿ ಅವರ ಉತ್ತರಾಧಿಕಾರಿಗಳು ಸಣ್ಣ ವಯಸ್ಸಿನವರಾಗಿದ್ದು ಬೇರೆ ಪೋಷಕರಿಲ್ಲದಿದ್ದರೆ ಆ ಆಸ್ತಿಯನ್ನು ಕಾಪಾಡುತ್ತಾ ಆ ಉತ್ತರಾಧಿಕಾರಿಗಳಿಗೆ ವಿದ್ಯಾಬುದ್ಧಿ ಕಲಿಸಿ ಯೋಗ್ಯರನ್ನಾಗಿ ಮಾಡುವ ಹೊಣೆಗಾರಿಕೆ ವಹಿಸಲು ಸರ್ಕಾರ ಏರ್ಪಡಿಸಿರುವ ಒಂದು ವಿಭಾಗ.

ನೇಮದಂತೆ ಸಕಾಲದಲ್ಲಿ ಗೊತ್ತಾದೆಡೆಯಲ್ಲಿ ಸ್ನಾನ-ಪಾನ ಆಹಾರ-ನಿದ್ರೆ ಗಳನ್ನು ಮಾಡುತ್ತಿದ್ದನು. ಬಿಪಿನ ಕಿಶೋರನ ಸಹವಾಸ ಅವನಿಗೊಂದು ದುರ್ವ್ಯಸನದಂತೆ ಪರಿಣಮಿಸಿತು. ಅವನ ಹಾಡುಗಳನ್ನು ಕೇಳುತ್ತ, ಅವನು ರಚಿಸಿದ ಗೀತ ನಾಟ್ಯಗಳ ವಿಷಯವಾಗಿ ಚರ್ಚೆ ಮಾಡುತ್ತಾ ಅನ್ನ ತಣ್ಣಗಾಗುತ್ತಿತ್ತು; ರಾತ್ರಿ ಮುಂದುವರಿಯುತ್ತಿತ್ತು. ಜವಾನರು ನಿಯಮ ತಪ್ಪದ ಸ್ವಭಾವವುಳ್ಳ ತಮ್ಮ ಯಜಮಾನನ ಚರಿತ್ರದೋಷಗಳಲ್ಲಿ ಕೇವಲ ಈ ಬಿಪಿನ ಕಿಶೋರನಲ್ಲೇ ಅತ್ಯಾಸಕ್ತಿಯೆಂದು ಹೇಳತೊಡಗಿದರು.

ರಾಣೀ ವಸಂತಕುಮಾರಿ ಗಂಡನನ್ನು ಗದರಿಸುತ್ತಾ–'ಎಲ್ಲಿಯದೋ ಒಂದು ನಿರ್ಭಾಗ್ಯ ಕಪಿಯನ್ನು ತಂದು ವೈಯನ್ನು ಮಣ್ಣುಪಾಲು ಮಾಡು ತ್ತಿರುವಿರಿ. ಅವನನ್ನು ದೂರ ಓಡಿಸಿದರೆ ನನ್ನ ತಲೆಯ ಭಾರ ಕಡಿಮೆ ಯಾಗುವುದು' ಎಂದು ಹೇಳಲಾರಂಭಿಸಿದಳು.

ಯುವತಿ ಸ್ತ್ರೀಯ ಈರ್ಷ್ಯೆಯನ್ನು ತಂಡು ರಾಜನು ಒಳಗೊಳಗೆ ಆನಂದದಿಂದ ನಗುತ್ತಿದ್ದನು. ಹೆಂಗಸರು ಯಾವನನ್ನು ಪ್ರೀತಿಸುವರೋ ಕೇವಲ ಅವನನ್ನು ಮಾತ್ರ ಬಲ್ಲರು. ಜಗತ್ತಿನ ಆದರಕ್ಕೆ ಪಾತ್ರರಾದವರು ಹಲವು ಗುಣವಂತರಿರುವರು ಎಂಬುದು ಸ್ತ್ರೀಯರ ಶಾಸ್ತ್ರದಲ್ಲಿ ಬರೆದಿರದು. ಅವರ ಕಿವಿಯಲ್ಲಿ ಯಾರು ವಿವಾಹದ ಮಂತ್ರಗಳನ್ನು ಉಚ್ಚರಿಸುವರೋ ಎಲ್ಲ ಸದ್ಗುಣಗಳೂ ಅವರಲ್ಲೇ ಮತ್ತು ಎಲ್ಲ ಆದರವೂ ಅವರಿಗೇ ಮೀಸಲು. ಗಂಡನ ಊಟದ ವೇಳೆಯಲ್ಲಿ ಅರ್ಧ ಗಂಟೆ ಆಲಸ್ಯವಾಗಲು ಸಹಿಸಲಾರರು. ಗಂಡನ ಆಶ್ರಿತನನ್ನು ದೂರ ತೊಲಗಿಸಿದರೆ ಆ ಬಡಪಾಯಿಗೆ ಒಂದು ಹಿಡಿ ಕೂಳು ಸಿಕ್ಕುವುದು ಕಷ್ಟವೆಂಬ ವಿಷಯದಲ್ಲಿ ಅವರುಗಳಿಗೆ ಸಂಪೂರ್ಣ ಉದಾಸೀನತೆ. ಸ್ತ್ರೀಯರ ಈ ವಿವೇಚನಾಹೀನ ಪಕ್ಷಪಾತ ದೂಷಣೀಯವಾಗಿರುವುದು. ಆದರೆ ಚಿತ್ತರಂಜನನಿಗೆ ಇದು ಸಂಪೂರ್ಣ ಅಪ್ರೀತಿಕರವೆಂದು ತೋರಲಿಲ್ಲ. ಅದರಿಂದ ಅವನು ಆಗಾಗ್ಗೆ ಹೆಚ್ಚು ಅಳತೆಯಲ್ಲಿ ಬಿಪಿನನ ಗುಣಗಾನ ಮಾಡಿ ಹೆಂಡತಿಗೆ ಹುಚ್ಚು ಹಿಡಿಸು ತ್ತಿದ್ದನು. ಮತ್ತು ಅದರಿಂದ ಅತ್ಯಾನಂದವನ್ನು ಅನುಭವಿಸುತ್ತಿದ್ದನು.

ಈ ರಾಜಕೀಯ ನಡವಳಿಕೆಯು ಬಡಪಾಯಿ ಬಿಪಿನನಿಗೆ ಅನು ಕೂಲವನ್ನುಂಟುಮಾಡಲಿಲ್ಲ. ಅಂತಃಪುರದಲ್ಲಿ ವಿಮುಖತೆಯಿಂದ ಅವನ

ಆಹಾರಾದಿಗಳ ಏರ್ಪಾಡಿನಲ್ಲಿ ಪದೇ ಪದೇ ಮುಳ್ಳು ಬೀಳತೊಡಗಿತು. ಧನಿಕರ ಮನೆಯ ಭೃತ್ಯರು ಆಶ್ರಿತರ ವಿಷಯದಲ್ಲಿ ಸ್ವಭಾವತಃ ಪ್ರತಿಕೂಲರು. ಅವರುಗಳು ರಾಣಿಯ ಕೋಪದಿಂದ ಧೈರ್ಯಹೊಂದಿ ಒಳಗೊಳಗೆ ಬಿಪಿನನಲ್ಲಿ ಹಲವು ವಿಧಗಳಲ್ಲಿ ಅನಾದರ ತೋರುತ್ತಿದ್ದರು.

ರಾಣಿ ಒಂದು ದಿನ ಒಬ್ಬ ಆಳನ್ನು ಗದರಿಸುತ್ತ—"ನೀನು ಯಾವ ಕೆಲಸ ಮಾಡುವುದನ್ನೂ ಕಾಣೆ. ದಿನವೆಲ್ಲಾ ನೀನೇನು ಮಾಡುತ್ತೀಯೆ?" ಎಂದಳು.

ಅದಕ್ಕವನು "ರಾಜರ ಅಪ್ಪಣೆಯಂತೆ ಬಿಪಿನ್ ಬಾಬುಗಳ ಸೇವೆಯಲ್ಲೇ ನನಗೆ ದಿನ ಕಳೆಯುತ್ತಿದೆ" ಎಂದನು—ರಾಣಿಯು "ಸರಿ, ಬಿಪಿನ್ ಬಾಬುಗಳೇನು ನವಾಬರಾಗಿ ಬಿಟ್ಟಿದ್ದಾರೆ!" ಎಂದಳು.

ಮಾರನೇ ದಿನದಿಂದ ಆಳು ಬಿಪಿನನ ಎಂಜಲನ್ನು ಹಾಗೆಯೇ ಬಿಟ್ಟಿರುತ್ತಿದ್ದನು. ಹಲವು ಸಮಯಗಳಲ್ಲಿ ಅವನ ಊಟವನ್ನು ಮುಚ್ಚಿಡುತ್ತಲೂ ಇರಲಿಲ್ಲ. ಅಭ್ಯಾಸವಿಲ್ಲದ ಕೈಯಿಂದ ಬಿಪಿನನು ತನ್ನ ತಟ್ಟೆಯನ್ನು ತಾನೇ ತೊಳೆಯಲಾರಂಭಿಸಿದನು. ಮತ್ತು ಮಧ್ಯೆ ಮಧ್ಯೆ ಉಪವಾಸ ಮಾಡಿದನು. ಆದರೆ ಈ ವಿಷಯವಾಗಿ ರಾಜನಲ್ಲಿ ದೂರು ಹೇಳುವುದು ಅವನ ಸ್ವಭಾವಕ್ಕೆ ವಿರುದ್ಧವಾಗಿತ್ತು. ಯಾವನಾದರೊಬ್ಬ ಆಳಿನ ಸಂಗಡ ಜಗಳವಾಡಿ ಅವನು ತನ್ನ ಗೌರವ ಕಳೆದುಕೊಳ್ಳಲಿಲ್ಲ. ಈ ರೀತಿಯಲ್ಲಿ ಬಿಪಿನನ ಅದೃಷ್ಟಕ್ಕೆ ಅಂಗಳದಲ್ಲಿ ಆದರ ಹೆಚ್ಚುತ್ತಲೂ ಅಂತಃಪುರದಲ್ಲಿ ಅನಾದರಣೆ ಎಲ್ಲೆಯಿಲ್ಲದೆ ಬೆಳೆಯಲೂ ತೊಡಗಿತು.

ಇತ್ತ ಸುಭದ್ರಾಹರಣ ನಾಟಕ ರಿಹರ್ಸಲ್ ಆಗಿ ಸಿದ್ಧವಾಯಿತು. ಅರಮನೆಯ ಅಂಗಳದಲ್ಲಿ ಅದರ ಅಭಿನಯ ನಡೆಯಿತು. ರಾಜ ಸ್ವತಃ ಕೃಷ್ಣನ ವೇಷ ಧರಿಸಿದ್ದನು. ಬಿಪಿನ ಅರ್ಜುನನಾಗಿದ್ದನು. ಆಹಾ! ಅರ್ಜುನನ ಕಂಠ ಎಂಥಾದ್ದು! ರೂಪವೂ ಹಾಗೆಯೇ—ನೋಡಿದವರು ಬಾಯಿ ತುಂಬಾ ಹೊಗಳತೊಡಗಿದರು.

ರಾಜ ರಾತ್ರಿ ಅಂತಃಪುರಕ್ಕೆ ಬಂದಾಗ 'ಅಭಿನಯ ಹೇಗಿತ್ತು?' ಎಂದು ವಸಂತಕುಮಾರಿಯನ್ನು ಕೇಳಿದನು.

ರಾಣಿ—'ಬಿಪಿನನ ಅರ್ಜುನನ ವೇಷ ಬಹು ಲಕ್ಷಣವಾಗಿತ್ತು.' ಅವನ ಮುಖ ದೊಡ್ಡವರ ಮಗನಿಗೆ ತಕ್ಕಹಾಗಿದೆ—ಅದಕ್ಕೆ ತಕ್ಕ ಕಂಠವೂ ಇದೆ' ಎಂದಳು.

ಮತ್ತೆ 'ನನ್ನ ಮುಖ ಲಕ್ಷಣವಿಲ್ಲ ಅಲ್ಲವೇ – ಕಂಠವೂ ಚೆನ್ನಾಗಿಲ್ಲ ಅಲ್ಲವೇ' ಎಂದು ಕೇಳಿದನು.

'ನಿಮ್ಮ ಸಂಗತಿ ಬೇರೆ' ಎಂದು ರಾಣಿ ಹೇಳಿ ಮತ್ತೆ ಬಿಪಿನನ ಅಭಿನಯುವನ್ನು ಹೊಗಳತೊಡಗಿದಳು. ಇದುವರೆಗೂ ರಾಜ ಇದಕ್ಕಿಂತ ಹೆಚ್ಚು ಉತ್ಸಾಹ ಭಾಷೆಯಲ್ಲಿ ರಾಣಿಯ ಬಳಿ ಬಿಪಿನನನ್ನು ಹೊಗಳಿದ್ದನು. ಆದರೆ ಇಂದು ರಾಣಿಯ ಬಾಯಿಂದ ಇಷ್ಟು ಮಾತ್ರ ಪ್ರಶಂಸೆ ಕೇಳಿ ಅವನು ಭಾವಿಸತೊಡಗಿದ್ದೇನೆಂದರೆ—'ಬಿಪಿನನ ಶಕ್ತಿ ಏನು ಮಹಾ— ವಿವೇಚನೆಯಿಲ್ಲದವರು ಅವನನ್ನು ಮಿತಿಮೀರಿ ಹೊಗಳುತ್ತಿರುವರಿ ಅವನ ಮುಖವೇನು ಮಹಾ—ಕಂಠ ತಾನೇ ಏನು ಅಂತಹ ಅಪೂರ್ವವೋ'—ಕೆಲವು ದಿನಗಳ ಹಿಂದೆ ತಾನೂ ಈ ವಿವೇಚನೆಯಿಲ್ಲದವರ ಗುಂಪಿನಲ್ಲಿದ್ದನೆಂಬುದೂ ಅಕಸ್ಮಾತ್ತಾಗಿ ಯಾವ ಕಾರಣದಿಂದ ಅವನ ವಿವೇಚನಾಶಕ್ತಿ ವೃದ್ಧಿಯಾಯಿತೆಂಬುದೂ ಅವನಿಗೆ ತಿಳಿಯಲಿಲ್ಲ.

ಮರುದಿನದಿಂದ ಬಿಪಿನನ ಊಟ ಉಪಚಾರಾದಿಗಳಿಗೆ ತಕ್ಕ ಏರ್ಪಾಡಾಯಿತು. ವಸಂತಕುಮಾರಿ ರಾಜನೊಡನೆ 'ಬಿಪಿನನಿಗೆ ಕಛೇರಿಯ ಮನೆಯಲ್ಲಿ ಮುತ್ಸದ್ದಿಗಳೊಡನೆ ವಾಸಿಸುವಂತೆ ಏರ್ಪಾಡು ಮಾಡಿರುವುದು ನ್ಯಾಯವಲ್ಲ. ಏನಾದರೇನು, ಒಂದು ಕಾಲದಲ್ಲಿ ಅವನೂ ಉತ್ತಮ ಸ್ಥಿತಿಯಲ್ಲಿ ಇದ್ದವನಲ್ಲವೇ!' ಎಂದಳು.

ರಾಜನು ಸಂಕ್ಷೇಪದಲ್ಲಿ ಮಾತನ್ನು ಹಾರಿಸಿಬಿಟ್ಟು–'ಹೌದು' ಎಂದನು.

ಮಗುವಿನ ಅನ್ನಪ್ರಾಶನದ ಸಂದರ್ಭದಲ್ಲಿ ಮತ್ತೊಮ್ಮೆ ನಾಟಕದ ಏರ್ಪಾಡು ಮಾಡಿಸಿರೆಂದು ರಾಣಿ ಒತ್ತಾಯಪಡಿಸಿದಳು. ರಾಜ ಅವಳ ಮಾತನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ.

ಒಂದು ದಿನ ಬಟ್ಟೆಗಳನ್ನು ಸರಿಯಾಗಿ ನೆರಿಹಿಡಿದು ಇಟ್ಟಿಲ್ಲವೆಂದು ರಾಜನು ಆಳನ್ನು ಗದರಿಸಲು ಅವನು-'ನಾನೇನು ಮಾಡಲಿ - ರಾಣಿ

ಯವರ ಅಪ್ಪಣೆಯಂತೆ ಬಿಪಿನ ಬಾಬುಗಳ ಪಾತ್ರೆಗಳನ್ನು ಉಜ್ಜುವುದರಲ್ಲೂ, ಇತರ ವಿಧಗಳಲ್ಲಿ ಸೇವೆ ಮಾಡುವುದರಲ್ಲೂ ಹಗಲೆಲ್ಲಾ ಕಳೆಯುತ್ತಿದೆ', ಎಂದನು. ರಾಜನು ಕೋಪಗೊಂಡು - 'ಇಶ್- ಬಿಪಿನ್ ಬಾಬುಗಳೇನು ದೊಡ್ಡ ನವಾಬರಾಗಿ ಹೋಗಿರುವರು! ತನ್ನ ಪಾತ್ರೆಗಳನ್ನು ತಾನೇ ತೊಳೆದುಕೊಳ್ಳಲಾರನೋ!' ಎಂದನು.

ಬಿಪಿನ ಪುನರ್ಮೂಷಿಕನಾಗಿಬಿಟ್ಟನು.

ಸಂಜೆಯ ಹೊತ್ತಿನಲ್ಲಿ ರಾಜನ ಸಂಗೀತ ಚರ್ಚೆಯ ವೇಳೆಯಲ್ಲಿ ಪಕ್ಕದ ಕೊಟಡಿಯಲ್ಲಿ ಇದ್ದು ಪರದೆಯ ಮರೆಯಲ್ಲಿ ತಾನೂ ಹಾಡು ಕೇಳಬೇಕೆಂದೂ, ಬಿಪಿನನ ಗಾನ ಅವಳಿಗೆ ರುಚಿಸುವುದೆಂದೂ ರಾಣಿ ರಾಜನನ್ನು ಒತ್ತಾಯಪಡಿಸಲಾರಂಬಿಸಿದಳು. ಶೀಘ್ರದಲ್ಲೇ ರಾಜ ಮೊದಲಿನಂತೆ ನಿಯಮ ಪ್ರಕಾರ ಆಹಾರ-ನಿದ್ರೆಗಳನ್ನು ಮಾಡತೊಡಗಿದನು. ಗಾಯನ - ವಾದನಗಳು ಮತ್ತೆ ನಡೆಯಲಿಲ್ಲ.

ರಾಜ ಮಧ್ಯಾಹ್ನದ ವೇಳೆಯಲ್ಲಿ ಜಮೀನ್ದಾರಿಯ ಕೆಲಸ ನೋಡುತ್ತಿದ್ದನು. ಒಂದು ದಿನ ಹೊತ್ತಿಗೆ ಮುಂಚೆಯೇ ಅಂತಃಪುರಕ್ಕೆ ಹೋದಾಗ ರಾಣಿ ಏನನ್ನೋ ಓದುತ್ತಿರುವುದನ್ನು ಕಂಡು 'ಅದೇನು ಓದುತ್ತಿರುವೆ?' ಎಂದು ಕೇಳಿದನು.

ರಾಣಿ ಮೊದಲು ಸ್ವಲ್ಪ ಅಪ್ರತಿಭಳಾಗಿ - 'ಬಿಪಿನ್ ಬಾಬುಗಳ ಹಾಡುಗಳ ಪುಸ್ತಕವನ್ನು ತರಿಸಿ ಒಂದೆರಡು ಹಾಡುಗಳನ್ನು ಬಾಯಿಪಾಠ ಮಾಡುತ್ತಿರುವೆನು. ಹಠಾತ್ತಾಗಿ ನಿಮ್ಮ ಅಭಿರುಚಿ ಬದಲಾಯಿಸಿಬಿಟ್ಟದೆ. ಇನ್ನು ಹಾಡುಗಳನ್ನು ಕೇಳಲು ಅವಕಾಶವಿಲ್ಲವಲ್ಲ' ಎಂದಳು. ಬಹು ದಿನಗಳಿಂದ ಈ ಅಭಿರುಚಿಯನ್ನು ಬದಲಾಯಿಸುವುದಕ್ಕಾಗಿ ರಾಣಿ ಹಲವು ಪ್ರಯತ್ನಗಳನ್ನು ಮಾಡಿದ್ದಳೆಂಬ ಸಂಗತಿಯನ್ನು ಅವಳಿಗೆ ಯಾರೂ ನೆನಪುಮಾಡಿ ಕೊಡಲಿಲ್ಲ.

ಮರುದಿನ ರಾಜನು ಬಿಪಿನನನ್ನು ಕಳುಹಿಸಿಕೊಟ್ಟನು. ಮಾರನೇ ದಿನದಿಂದ ಅವನ ಒಂದು ಹಿಡಿ ಕೂಳು ಸಿಕ್ಕುವುದೆಲ್ಲಿ ಎಂಬ ವಿಷಯವಾಗಿ ಸ್ವಲ್ಪವೂ ಯೋಚಿಸಲೇ ಇಲ್ಲ.

ಅಷ್ಟಕ್ಕೆ ವ್ಯಸನವಿಲ್ಲ. ಈ ನಡುವೆ ಬಿಪಿನನು ರಾಜನೊಡನೆ ಅಕೃತ್ರಿಮ ಅನುರಾಗದಿಂದ ಬಂಧಿತನಾಗಿಬಿಟ್ಟಿದ್ದನು. ವೇತನಕ್ಕಿಂತ ಹೆಚ್ಚಾಗಿ ರಾಜನ ಸ್ನೇಹ ಅವನಬಳಿ ಹೆಚ್ಚು ಬೆಲೆಯುಳ್ಳದ್ದಾಗಿತ್ತು. ಆದರೆ ಯಾವ ಅಪರಾಧಕ್ಕಾಗಿ ಆಕಸ್ಮಾತ್ತಾಗಿ ರಾಜನ ಪ್ರೀತಿ ವಿಶ್ವಾಸವನ್ನು ಕಳೆದುಕೊಂಡೆನೆಂಬ ವಿಷಯ ಎಷ್ಟು ಯೋಚಿಸಿದರೂ ಅವನಿಗೆ ಹೊಳೆಯಲೇ ಇಲ್ಲ. ದೀರ್ಘವಾಗಿ ನಿಟ್ಟುಸಿರುಬಿಡುತ್ತ ತನ್ನ ಹಳೆಯ ತಂಬೂರಿಗೆ ಗೌಸನ್ನು ಹಾಕಿ ಆಪ್ತಮಿತ್ರರೇ ಇಲ್ಲದ ಈ ಬೃಹತ್ ಪ್ರಪಂಚದಲ್ಲಿ ಹೊರಬಿದ್ದನು-- ಹೋಗುವ ಸಮಯದಲ್ಲಿ ತನ್ನ ಕೈಯಲ್ಲಿದ್ದ ಕೊನೆಯ ಎರಡು ರೂಪಾಯಿಗಳನ್ನು ರಾಜಭೃತ್ಯನಿಗೆ ಇನಾಮಾಗಿ ಕೊಟ್ಟು ಹೋದನು.

---

(ಕ್ರಿ. ಶ. ೧೯೦೦)

# ಅಪರಿಚಿತೆ

೧

ಇಂದಿಗೆ ನನಗೆ ಇಪ್ಪತ್ತೇಳು ವರ್ಷ ಪಾತ್ರ. ಈ ಬಾಳು ದೀರ್ಘತೆಯ ದೃಷ್ಟಿಯಿಂದ ದೊಡ್ಡದಲ್ಲ, ಅಥವಾ ಗುಣದ ದೃಷ್ಟಿಯಿಂದ ವಿಶೇಷವಾದುದೂ ಅಲ್ಲ. ಆದರೂ ಇದರದೊಂದು ವಿಶೇಷ ಮೂಲ್ಯವಿದೆ—ಹೃದಯದ ಮೇಲೆ ದುಂಬಿ ಬಂದು ಕುಳಿತ ಹೂವಿನ ಎಸಳಿನಂತೆ ಇದು. ಪದಕ್ಷೇಪದ ಇತಿಹಾಸ ಹೂವಿನ ಜೀವನದ ಮಧ್ಯದಲ್ಲಿ ಹೀಚು ಕಟ್ಟಿದೆ.

ಆ ಇತಿಹಾಸ ಆಕಾರದಲ್ಲಿ ಸಣ್ಣದು. ಅದನ್ನು ಸಣ್ಣದಾಗಿಯೇ ಬರೆಯುವೆನು. ಸಣ್ಣದೆಲ್ಲ ಸಾಮಾನ್ಯವೆಂದು ಅವಹೇಳನ ಮಾಡದಿರುವವರು ಆದರ ರಸವನ್ನು ಅನುಭವಿಸುವರು.

ಕಾಲೇಜಿನ ಎಷ್ಟು ಪರೀಕ್ಷೆಗಳನ್ನು ಮಾಡಬಹುದೋ ಅವೆಲ್ಲವನ್ನೂ ನಾನು ಮುಗಿಸಿರುವೆನು. ಚಿಕ್ಕಂದಿನಲ್ಲಿ ಸಂಸ್ಕೃತ ಪಂಡಿತರು ನನ್ನ ಸುಂದರ ಮುಖವನ್ನು ಕಂಡು ಶಿರೀಷಪುಷ್ಪಕ್ಕೂ ತೊಂಡೇಹಣ್ಣಿಗೂ ಹೋಲಿಸಿ ಹಾಸ್ಯಮಾಡುವ ಸುಯೋಗ ಪಡೆದಿದ್ದರು. ಅವರು ಹಾಗೆ ಹೇಳಿದಾಗ ನನಗೆ ಬಲು ನಾಚಿಕೆಯಾಗುತ್ತಿತ್ತು. ಆದರೆ ವಯಸ್ಸಾದ ಮೇಲೆ ಈ ವಿಷಯವನ್ನು ಯೋಚಿಸತೊಡಗಿದೆನು. ಜನ್ಮಾಂತರವಿದ್ದುದೇ ಆದರೆ ಮುಂದಿನ ಜನ್ಮಕ್ಕೆ ನನಗೆ ಸುರೂಪವೂ ನಮ್ಮ ಪಂಡಿತರಿಗೆ ಕುರೂಪವೂ ಖಂಡಿತ ಉಂಟಾಗುವುದು.

ನಮ್ಮ ತಂದೆ ಒಂದು ಕಾಲದಲ್ಲಿ ಬಡವರಾಗಿದ್ದರು. ವಕೀಲೀ ಉದ್ಯೋಗ ನಡೆಸಿ ಅಪಾರ ಹಣ ಸಂಪಾದಿಸಿದರು. ಆದರೆ ಅನುಭವಿಸಲು ಒಂದು ಘಳಿಗೆಯೂ ಅವಕಾಶ ಹೊಂದಲಿಲ್ಲ. ಸಾಯುವಾಗ ನಿಟ್ಟುಸಿರು ಬಿಟ್ಟರಲ್ಲಾ ಅದೇ ಅವರ ಜೀವಮಾನದಲ್ಲಿ ಮೊಟ್ಟಮೊದಲು ಸಿಕ್ಕಿದ ಅವಕಾಶ.

ಆಗ ನನ್ನ ವಯಸ್ಸು ಅಲ್ಪ. ತಾಯಿಯ ಪೋಷಣೆಯಿಂದಲೇ ನಾನು ದೊಡ್ಡವನಾದೆ. ತಾಯಿ ಬಡವರ ಮನೆಯಲ್ಲಿ ಹುಟ್ಟಿದವಳು. ನಾವು ಈಗ ಧನಿಕರೆಂಬ ವಿಷಯವನ್ನು ಅವಳು ಮರೆಯಲಿಲ್ಲ. ನನಗೂ ಮರೆಯಲು ಅವಕಾಶ ಕೊಡಲಿಲ್ಲ. ಚಿಕ್ಕಂದಿನಲ್ಲಿ ನಾನು ಅವಳ ತೊಡೆಯ ಮೇಲೆಯೇ ಬೆಳೆದೆ. ಪ್ರಾಯಶಃ ಅದರಿಂದಲೇ ಕೊನೆಯ ವರೆಗೆ ನನಗೆ ಪೂರ್ತಾ ವಯಸ್ಸೇ ಆಗಲಿಲ್ಲವೋ ಏನೋ—ಇಂದಿಗೂ ನನ್ನನ್ನು ನೋಡಿದವರಿಗೆ ನಾನು ಅನ್ನಪೂರ್ಣೆಯ ತೊಡೆಯ ಮೇಲಿರುವ ಗಜಾನನ ಚಿಕ್ಕತಮ್ಮನಂತೆ ಕಾಣಿಸುವೆನು.

ನನ್ನ ನಿಜವಾದ ಪೋಷಕ ನನ್ನ ಸೋದರಮಾವ. ಆತ ನನಗಿಂತ ಬಹಳ ಎಂದರೆ ಆರೇಳು ವರ್ಷ ದೊಡ್ಡವರು. ಆದರೂ ಫಲ್ಗುನೀ ನದಿಯ ಮರಳಿನಂತೆ ನಮ್ಮ ಸಂಸಾರವನ್ನೆಲ್ಲಾ ತಮ್ಮೊಳಗೆ ಅಡಗಿಸಿಕೊಂಡು ಬಿಟ್ಟಿದ್ದರು. ಅವರನ್ನು ಚುಚ್ಚಿದಲ್ಲದೆ ಒಂದು ಗುಟುಕು ರಸ ದೊರೆಯಲು ಸಾಧ್ಯವಿರಲಿಲ್ಲ. ಆದ್ದರಿಂದ ಯಾವ ವಿಷಯವನ್ನೂ ನಾನಾಗಿ ಯೋಚಿಸುವ ಆವಶ್ಯಕತೆಯೇ ಇರಲಿಲ್ಲ.

ಹೆಣ್ಣು ಹೆತ್ತವರು ಮಾತ್ರವೇ ನಾನು ಸತ್ಪಾತ್ರನೆಂದು ಒಪ್ಪತಕ್ಕವರು. ಹೊಗೇಸೊಪ್ಪು ಸೇದುವ ಅಭ್ಯಾಸ ಕೂಡ ನನಗೆ ಇರಲಿಲ್ಲ. ಸಭ್ಯನಾಗಲು ನನಗೆ ಯಾವ ತೊಡಕೂ ಇರಲಿಲ್ಲ. "ಆದ್ದರಿಂದಲೇ ನಾನು ಹದಿನಾರಣೆ ಸಾಭ್ಯಸ್ಥ." ತಾಯಿ ಇಟ್ಟ ಗೆರೆಯನ್ನು ಮೀರದೆ ನಡೆಯುವ ಪದ್ಧತಿ ನನ್ನಲ್ಲಿದೆ. ಅಂದರೆ ಗೆರೆಯನ್ನು ಮೀರುವ ಶಕ್ತಿ ನನಗೆ ಇಲ್ಲವೇ ಇಲ್ಲ. ಅಂತಃಪುರದ ಶಾಸನದಂತೆ ನಡೆದುಕೊಳ್ಳುವ ಹಾಗೆ ನಾನು ತಯಾರಾಗಿರುವೆನು. ಯಾರಾದರೂ ಕನ್ಯೆ ಸ್ವಯಂವರೆಯಾಗುವವಳಿದ್ದರೆ ಆಕೆ ಈ ಸಂಗತಿಯನ್ನು ನೆನಪಿಡಲಿ.

ಬಹು ಜನ ಧನಿಕರ ಮನೆಯಿಂದ ನನಗೆ ಹೆಣ್ಣು ಕೊಡಲು ಬಂದಿದ್ದರು. ಆದರೆ ಪ್ರಪಂಚದಲ್ಲಿ ನನ್ನ ಭಾಗ್ಯದೇವತೆಯ ಛೀಫ್ ಏಜಂಟು ನನ್ನ ಸೋದರಮಾವ—ಆತ ಒಪ್ಪಲಿಲ್ಲ. ಮದುವೆಯ ವಿಷಯದಲ್ಲಿ ಅವನದೊಂದು ಪ್ರತ್ಯೇಕ ಅಭಿಪ್ರಾಯವಿತ್ತು. ಧನಿಕರ ಹುಡುಗಿಯನ್ನು ಅವನು ಒಪ್ಪುತ್ತಿರಲಿಲ್ಲ. ನಮ್ಮ ಮನೆಗೆ ಬರುವ ಹೆಣ್ಣು ತಲೆ ತಗ್ಗಿಸಿಕೊಂಡು ಬರ

ಬೇಕೆಂದು ಅವನ ಇಷ್ಟ. ಹಣವಿಲ್ಲದಿದ್ದರೂ ಧಾರಾಳವಾಗಿ ಹಣ ದೊರಕಿಸಲು ಹಿಂಜರಿಯದಂತಹ ಬೀಗರನ್ನು ಅವನು ನಿರೀಕ್ಷಿಸುತ್ತಿದ್ದನು. ಯಾರನ್ನು ಹಿಂಡಿದರೆ ಪ್ರಯೋಜನವಾಗುವುದೋ ಆದರೆ ನಮ್ಮ ಮನೆಗೆ ಬಂದಾಗ ಮಾತ್ರ ಖಾಸಾ ವೀಳ್ಯಕ್ಕೆ ಬದಲು ಖರ್ಚಿ ವೀಳ್ಯ ಕೊಟ್ಟರೂ ಆಕ್ಷೇಪಣೆ ಮಾಡರೋ ಅಂತಹ ಬೀಗರನ್ನು ಹುಡುಕುತ್ತಿದ್ದನು.

ನನ್ನ ಸ್ನೇಹಿತ ಹರೀಶ ಕಾನ್‌ಪುರದಲ್ಲಿ ಕೆಲಸ ಮಾಡುತ್ತಿದ್ದ. ರಜದಲ್ಲಿ ಅವನು ಕಲ್ಕತ್ತೆಗೆ ಬಂದು ನನ್ನ ಮನಸ್ಸನ್ನು ತಲ್ಲಣಗೊಳಿಸಿದನು– 'ಲೋ! ಮದುವೆಯಾಗುವುದಾದರೆ ಹೇಳು ಚಿನ್ನದಂತಹ ಹೆಣ್ಣಿದೆ' ಎಂದನು.

ಕೆಲವು ದಿನಗಳ ಹಿಂದೆ ಎಂ. ಎ. ಪಾಸ್ ಮಾಡಿದ್ದೆನು. ಮುಂದೆ ಕೆಲಸವೇನೂ ಇರಲಿಲ್ಲ. ಪರೀಕ್ಷೆಯಿಲ್ಲ; ಉದ್ಯೋಗವಿಲ್ಲ. ಸ್ವಂತ ಆಸ್ತಿಯನ್ನು ನೋಡಿಕೊಳ್ಳಬೇಂಬ ಯೋಚನೆಯೂ ಇಲ್ಲ; ಆಸಕ್ತಿಯೂ ಇಲ್ಲ. ಮತ್ತು ಇದ್ದದ್ದೆಲ್ಲಾ ಮನೆಯಲ್ಲಿ ತಾಯಿಯ ಆಡಳಿತ; ಹೊರಗೆ ಮಾವನ ಅಧಿಕಾರ.

ಈ ಬಿಡುವಿನ ಮರುಭೂಮಿಯಲ್ಲಿ ನನ್ನ ಹೃದಯ ಆಗ ವಿಶ್ವವ್ಯಾಪೀ ನಾರೀರೂಪದ ಹಗಲುಗನಸನ್ನು ಕಾಣುತ್ತಿತ್ತು. ಆಕಾಶದಲ್ಲಿ ಅವಳ ದೃಷ್ಟಿ, ವಾಯುವಿನಲ್ಲಿ ಅವಳ ಉಚ್ಛ್ವಾಸ, ಗಿಡಗಳ ಶಬ್ದದಲ್ಲಿ ಅವಳ ಗುಪ್ತ ಮಾತು ಕತೆಗಳು ಇವು ನನ್ನನ್ನು ಸ್ಪರ್ಶಿಸುತ್ತಿದ್ದುವು.

ಇಂತಹ ಸಮಯದಲ್ಲಿ ಹರೀಶನು ಬಂದು "ಹೆಣ್ಣು ಬೇಕಾಪದ್ದೇ ಆದರೆ....ಹೇಳು...."ಎಂದು ಮುಂತಾಗಿ ನನಗೆ ಹೇಳಿದನು. ಮನಸ್ಸು ವಸಂತವಾಯುವಿನ ಬಕುಲವನದ ಚಿಗುರೆಲೆಗಳಂತೆ ಚಂಚಲವಾಯಿತು. ಹರೀಶ ರಸಿಕ. ರಸಭಂಗವಾಗದಂತೆ ವರ್ಣಿಸಬಲ್ಲವನು. ನನ್ನ ಮನಸ್ಸೂ ಹಾತೊರೆಯುತ್ತಿತ್ತು. ನಾನು ಹರೀಶನನ್ನು ಕರೆದು—'ಒಂದು ಸಲ ಮಾವನ ಹತ್ತಿರ ಈ ಪ್ರಸ್ತಾಪವೆತ್ತಬಾರದೇ—' ಎಂದೆ.

ಹರೀಶ ಮಾತನಾಡಿ ಮರಳು ಮಾಡುವುದರಲ್ಲಿ ನುರಿತ ಕೈ. ಆದ್ದರಿಂದಲೇ ಎಲ್ಲಿ ಹೋದರೂ ಜನರು ಅವನನ್ನು ಆದರಿಸುತ್ತಿದ್ದರು. ಅವನು ಕೈಗೆ ಸಿಕ್ಕಿದಾಗ ಮಾವನೂ ಕೂಡ ಸುಲಭದಲ್ಲಿ ಬಿಡುತ್ತಿರಲಿಲ್ಲ.

ಸಂಗತಿ ಆತನ ಕಿವಿಯನ್ನು ಮುಟ್ಟಿತು. ಹುಡುಗಿಗಿಂತ ಹುಡುಗಿಯ ತಂದೆಯ ಸುದ್ದಿ ಕೇಳುವುದರಲ್ಲಿ ಆತನಿಗೆ ಹೆಚ್ಚು ಆಸಕ್ತಿ. ತಂದೆಯ ಪರಿಸ್ಥಿತಿಯೂ ಆತ ಕೋರುತ್ತಿದ್ದಂತೆಯೇ ಇತ್ತು. ಒಂದು ಕಾಲದಲ್ಲಿ ಇವರ ಮನೆತನದಲ್ಲಿ ಲಕ್ಷ್ಮಿಯ ಮಂಗಳ ಕಲಶ ತುಂಬಿ ಇತ್ತು. ಈಗ ಅದು ಬರಿದಾಗಿದ್ದರೂ ತಳದಲ್ಲಿ ಸ್ವಲ್ಪ ಉಳಿದಿದೆ. ದೇಶದಲ್ಲಿ ವಂಶದ ಮರ್ಯಾದೆಯನ್ನು ಉಳಿಸಿಕೊಂಡು ಬದುಕುವುದು ಅಸಾಧ್ಯವೆಂದು ನಿಶ್ಚಯಿಸಿ ಅವರು ಪಶ್ಚಿಮಕ್ಕೆ ಹೋಗಿ ಕಾನ್ಪುರದಲ್ಲಿ ಬಡ ಗೃಹಸ್ಥರಂತೆ ಸಂಸಾರ ಮಾಡಿಕೊಂಡಿರುವರಂತೆ—ಒಬ್ಬ ಮಗಳಲ್ಲದೆ ಅವರಿಗಿನ್ನಾರೂ ಇಲ್ಲ. ಅವರ ಅನಂತರ ಲಕ್ಷ್ಮಿಯ ಕಲಶದಲ್ಲಿ ಅಲ್ಪ ಸ್ವಲ್ಪ ಉಳಿದಿರುವುದನ್ನು ಸಂಪೂರ್ಣವಾಗಿ ಮಗಳು—ಅಳಿಯನ ಕೈಲಿ ಸುರಿದುಹೋಗಲು ಯಾವ ಅಭ್ಯಂತರವೂ ಇಲ್ಲ.

ಇದೆಲ್ಲ ಒಳ್ಳೆಯ ಸುದ್ದಿಯೇ. ಆದರೆ ಹುಡುಗಿಯ ವಯಸ್ಸು ಹದಿನೈದಾಗಿದೆಯೆಂದು ಮಾವನ ಮನಸ್ಸಿಗೆ ಸ್ವಲ್ಪ ಭಾರವಾಯಿತು. ವಂಶದಲ್ಲಂತೂ ಏನೇನೂ ದೋಷವಿಲ್ಲ. ತಂದೆಯು ಮಗಳಿಗೆ ಯೋಗ್ಯನಾದ ವರನನ್ನು ಹುಡುಕಿಯೂ ಸಿಕ್ಕಲಿಲ್ಲ. ಮುಖ್ಯಕಾರಣ ವರಗಳ ಸಂತೆಯಲ್ಲಿ ಮಹಾ ಅರ್ಘ್ಯವನ್ನು ಒಪ್ಪಿಸಬೇಕು. ಹಾಗೆಯೇ ಹೆಣ್ಣಿನ ತಂದೆಯೂ ಜನಕನಂತೆ ತನ್ನ ಮಗಳಿಗೆ ರಾಮನನ್ನೇ ಹುಡುಕುತ್ತಿದ್ದನು. ತಂದೆಗೇನೋ ಇವೆಲ್ಲ ಕಟ್ಟಿಕೊಂಡು ಸಾವಕಾಶವಾಗಿರಬಹುದು, ಆದರೆ ಹುಡುಗಿಯ ವಯಸ್ಸು ಮುಂದುವರಿಯುದೇ ಸಾವಕಾಶ ಮಾಡುವುದೇ.

ಹಾಗೂ ಹೀಗೂ ಹರೀಶನ ಸರಸಜಿಹ್ವೆಯಿಂದ ಮಾವನ ಮನಸ್ಸು ಕರಗಿತು. ಮದುವೆಯ ಪ್ರಸ್ತಾಪದ ಮೊದಲನೆಯ ಅಂಕ ನಿರ್ವಿಘ್ನವಾಗಿ ಮುಗಿಯಿತು. ಕಲ್ಕತ್ತೆಯ ಹೊರಗಿನ ಭೂಭಾಗವೆಷ್ಟಿದೆಯೋ ಅದೆಲ್ಲವೂ ಅಂಡಮಾನ್ ದ್ವೀಪಕ್ಕೆ ಸೇರಿದುದು ಎಂದು ಮಾವ ನಿರ್ಧರಿಸಿದ್ದನು. ಇಡೀ ಜೀವಮಾನದಲ್ಲಿ ಒಮ್ಮೆ ಒಂದು ಮುಖ್ಯ ಕೆಲಸಕ್ಕಾಗಿ ಅವನು ಕೊನ್ನಾಗರಕ್ಕೆ ಹೋಗಿದ್ದನು. ಮಾವನೇನಾದರೂ ಮನುವಾಗಿದ್ದಿದ್ದರೆ ಹೌರಾ ಸೇತುವೆ ದಾಟಿ ಹೋಗುವುದು ನಿಷಿದ್ಧವೆಂದು ತನ್ನ ಧರ್ಮಶಾಸ್ತ್ರದಲ್ಲಿ ಬರೆದಿಡುತ್ತಿದ್ದ. ಸ್ವತಃ ಹೋಗಿ ಹುಡುಗಿಯನ್ನು

ನೋಡಿ ಬರಬೇಕೆಂದು ನನಗೆ ಆಶೆಯಿತ್ತು. ಆದರೆ ಆ ವಿಷಯ ಮಾವನಿದಿರಿನಲ್ಲಿ ಪ್ರಸ್ತಾಪಿಸುವಷ್ಟು ಧೈರ್ಯವಾಗಲಿಲ್ಲ. ಹುಡುಗಿಯನ್ನು ನೋಡಿಕೊಂಡು ಬರುವುದಕ್ಕಾಗಿ ನಮ್ಮ ದೊಡ್ಡಮ್ಮನ ಮಗ—'ವಿನೂ ಅಣ್ಣ'ನನ್ನು ಕಳುಹಿಸಿದ್ದರು. ಅವನ ಅಭಿಪ್ರಾಯ, ಅಭಿರುಚಿ ಮತ್ತು ದಕ್ಷತೆಯಲ್ಲಿ ನನಗೆ ಹದಿನಾರಣೆ ನಂಬಿಕೆ. ವಿನೂ ಹೋಗಿಬಂದು 'ಹುಡುಗಿ ಚೆನ್ನಾಗಿದೆ—ಅಪರಂಜಿಯಂತಹ ಹೆಣ್ಣು—' ಎಂದನು. ಅವನ ಭಾಷೆ ಬಲು ತೂಕ ಮಾಡಿದ್ದು. ನಾವು 'ಬಲು ಚಂದ' ಎಂದು ಹೇಳಿದೆಡೆ ಅವನು—'ಸರಿ ಇದೆ ಸಾಮಾನ್ಯವಾಗಿ' ಎಂದು ಹೇಳುವ ಪದ್ಧತಿ—ಈ ಕಾರಣಗಳಿಂದ ನನ್ನ ಅದೃಷ್ಟಚಕ್ರದಲ್ಲಿ ಬ್ರಹ್ಮನಿಗೂ ಮನ್ಮಥನಿಗೂ ಏನೂ ವಿರೋಧವಿರಲಿಲ್ಲವೆಂದು ನಿರ್ಧರ ಮಾಡಿ ಕೊಂಡೆನು.

೨

ಮದುವೆಗೋಸ್ಕರ ಹೆಣ್ಣಿನ ಕಡೆಯುವರೇ ಕಲ್ಕತೆಗೆ ಬರಬೇಕಾಯಿ ತೆಂಬುದನ್ನು ಹೇಳಬೇಕಾದ್ದಿಲ್ಲ—ಹುಡುಗಿಯ ತಂದೆಗೆ ಹರೀಶನಲ್ಲಿ ಎಷ್ಟು ನಂಬಿಕೆಯಿತ್ತೆಂದರೆ ಮದುವೆಗೆ ಮುಂಚಿನ ಮೂರು ದಿನಗಳವರೆಗೆ ನನ್ನನ್ನು ನೋಡಲು ಬರಲಿಲ್ಲ. ಮೂರೇ ದಿನಗಳ ಹಿಂದೆ ಬಂದು ನನ್ನನ್ನು ನೋಡಿ ಆಶೀರ್ವಾದ ಮಾಡಿದ್ದರು. ಅವರಿಗೆ ಹೆಚ್ಚು ಕಡಿಮೆ ನಲವತ್ತು ವರ್ಷ ವಯಸ್ಸಿರಬಹುದು. ತಲೆಯ ಕೂದಲು ಕಪ್ಪಗಿತ್ತು. ಗಡ್ಡ ಮೀಸೆಗಳಲ್ಲಿ ಮಾತ್ರ ಒಂದೊಂದು ನರೆಗೂದಲಿತ್ತು. ನೋಡುವುದಕ್ಕೂ ಲಕ್ಷಣವಾಗಿದ್ದರು. ಗುಂಪಿನಲ್ಲಿ ಅವರೇನಾದರೂ ನಿಂತಿದ್ದರೆ ಜನರ ದೃಷ್ಟಿ ಎಲ್ಲರಿಗಿಂತ ಮುಂಚೆ ಅವರ ಮೇಲೆ ಬೀಳುತ್ತಿತ್ತು.

ನನ್ನನ್ನು ಕಂಡು ಅವರು ಸಂತೋಷಪಟ್ಟೇ ಇರಬೇಕೆಂದು ನಾನೆಣಿ ಸುತ್ತೇನೆ. ನಿರ್ಧರವಾಗಿ ಹೇಳುವುದು ಅಸಾಧ್ಯ. ಯಾಕೆಂದರೆ ಅವರು ಬಾಯಿ ಬಿಟ್ಟು ಮಾತನಾಡುವ ಮನುಷ್ಯರೇ ಅಲ್ಲ. ಮಾವನ ಬಾಯಿ ಗಂತೂ ತಡೆಯೇ ಇರಲಿಲ್ಲ. ಧನದಲ್ಲಿ, ಮಾನ ಮರ್ಯಾದೆಯಲ್ಲಿ ನಮ್ಮ ಮನೆಯವರು ಊರಿನಲ್ಲಿ ಯಾರಿಗೂ ಕೀಳಲ್ಲವೆಂಬ ಸಂಗತಿಯನ್ನು

ಅವನು ಹಲವು ವಿಧಗಳಲ್ಲಿ ಅಂದು ತೋರಿಸಿದ್ದನು. ಶಂಬುನಾಥಬಾಬು ಗಳಂತೂ ಈ ಮಾತುಗಳನ್ನು ಕೇಳಿದಾಗ ತುಟಿ ಪಿಟಕ್ ಅನ್ನಲಿಲ್ಲ. ನಾನಾಗಿದ್ದರೆ ಬಾಯಿ ಮುಚ್ಚಿಕೊಳ್ಳುತ್ತಿದ್ದೆ. ಆದರೆ ಮಾವನ ಬಾಯಿಗೆ ಬೀಗ ಹಾಕುವುದು ಮಹಾ ಕಷ್ಟ. ಶಂಭುನಾಥಬಾಬುಗಳು ಮ್ಲಾನ ವಾಗಿರುವುದನ್ನು ಕಂಡು 'ಮನುಷ್ಯ ಶುದ್ಧ ನಿರ್ಜೀವದವ' ಎಂದು ನಿರ್ಧರಿ ಸಿದನು. 'ಏನೇನೂ ಜೋರಿಲ್ಲದವರು' ಎಂದು ನಿರ್ಧರಿಸಿದನು. ಹೆಣ್ಣು ಕೊಟ್ಟವರು ಜೋರಾಗಿರುವದು ತಪ್ಪೆಂದು ಅವನ ಭಾವನೆ. ಶಂಭುನಾಥ ಬಾಬುಗಳು ಮನೆಗೆ ಹೊರಟಾಗ ಮಾವ ಗಾಡಿಯುವರೆಗೆ ಹೋಗಿಯೂ ಅವರನ್ನು ಬೀಳ್ಕೊಡದೆ ಕುಳಿತಲ್ಲಿಂದ ಉಪಚಾರ ಹೇಳಿ ಕಳುಹಿಸಿ ಬಿಟ್ಟನು.

ಹೆಣ್ಣು ಗಂಡುಗಳಿಗೆ ಕೊಡಬೇಕಾದ ಒಡವೆ ವಸ್ತುಗಳ ವಿಷಯ ವೆಲ್ಲಾ ನಿರ್ಧರವಾಯಿತು. ಮಾವ ತಾನು ಅಸಾಮಾನ್ಯ ಚತುರನೆಂದು ಎಣಿಸಿಕೊಂಡಿದ್ದನು. ಮಾತುಕತೆಗಳಲ್ಲಿ ಎಲ್ಲರೂ ಎಳ್ಳಷ್ಟೂ ಬಾಕಿ ಯಿಟ್ಟಿರಲಿಲ್ಲ. ಹಣದ (ವರದಕ್ಷಿಣೆಯ) ಮೊಬಲಗು ನಿರ್ಧರವಾಗಿಯೇ ಇದ್ದು ಹೆಣ್ಣಿಗೆ ಏನೇನು ಒಡವೆ ಹಾಕಬೇಕು, ಎಷ್ಟು ಸೇರು ಭಂಗಾರದಲ್ಲಿ ಒಡವೆ ಮಾಡಿಸಬೇಕು ಎಂಬುದೂ ಇತ್ಯರ್ಥವಾಗಿತ್ತು. ನಾನಂತೂ ಈ ಮಾತುಕತೆಗಳು ನಡೆದಾಗ ಅಲ್ಲಿರಲಿಲ್ಲ. ಕೊಡುವುದು ತೆಗೆದುಕೊಳ್ಳು ವುದು ಇವುಗಳ ವಿಷಯ ನಾನೇನೂ ಅರಿಯೆ. ಈ ಸಣ್ಣ ವಿಷಯವೂ ಮದುವೆಯಲ್ಲಿ ಒಂದು ಮಹತ್ವದ್ದೆಂಬುದನ್ನು ನಾನು ಅರಿತಿದ್ದೆ. ಆದರೆ ಈ ಅಂಶದ ಭಾರವನ್ನು ಹೊಣೆ ಹೊತ್ತಿದ್ದವರು ಯಾರೋ ಅವರು ಒಂದು ಗುಲಗಂಜಿಯಷ್ಟೂ ಮೋಸಹೋಗರೆಂಬುದೂ ಗೊತ್ತಿತ್ತು. ನಿಜಸ್ಥಿತಿ ಯೇನೆಂದರೆ—ಸಂಪೂರ್ಣವಾಗಿ ವ್ಯವಹಾರಜ್ಞಾನವುಳ್ಳವನೆಂದು ಮಾವ ನಲ್ಲಿ ನಮಗೆಲ್ಲ ಬಹು ಆದರ ನಮ್ಮ ವಿಷಯವಾಗಿ ಎಲ್ಲಿಯಾದರೂ ಎಳ್ಳಷ್ಟು ಆದಾಯಕ್ಕೆ ದಾರಿಯಿದ್ದರೆ ಮಾವ ತನ್ನ ಬುದ್ಧಿಶಕ್ತಿಯಿಂದ ಹದಿನಾರಾಣೆ ಲಾಭವನ್ನುಂಟುಮಾಡಿದಲ್ಲದೆ ಬಿಡನೆಂಬುದು ನಮಗೆಲ್ಲ ಖಂಡಿತವಾಗಿ ತಿಳಿದಿತ್ತು. ಇದರಿಂದ ನಮಗೇನೂ ನಷ್ಟವಿಲ್ಲದಿದ್ದು, ಇತರರಿಗೆ ನಷ್ಟ ಉಂಟಾಗುವ ಸಂದರ್ಭವಿತ್ತು. ಯಾರು ಹೇಗಾದರೂ

ಹೋಗಲಿ ಮಾವ ತನ್ನ ಹಣವನ್ನು ಬಿಡನೆಂಬುದು ಎಲ್ಲರಿಗೂ ಗೊತ್ತಿದ್ದ ವಿಷಯ.

ಲಗ್ನಪತ್ರಿಕೆ ಆಗುವ ವೇಳೆಯಲ್ಲಿ ನಡೆದ ಆಡಂಬರಕ್ಕೆ ಅಳತೆಯೇ ಇಲ್ಲ. ನಮ್ಮ ಮನೆಯಿಂದ ವಧುವಿನ ಮನೆಗೆ ಉಡುಗೊರೆ, ತಿಂಡಿ ತಿನಿಸುಗಳನ್ನು ಹೊತ್ತುಕೊಂಡು ಹೋದವರ ಸಂಖ್ಯೆಯನ್ನು ಲೆಕ್ಕಮಾಡಲು ಒಬ್ಬ ಗುಮಾಸ್ತನೇ ಬೇಕಾದೀತು. ಅವರಿಗೆಲ್ಲಾ ಮರ್ಯಾದೆಮಾಡಿ ಕಳುಹಿಸುವುದರಲ್ಲಿ ಹೆಣ್ಣಿನ ಕಡೆಯುವರಿಗೂ ಬೇಕಾದಷ್ಟು ಖರ್ಚಾಗಿರಬೇಕು. ಈ ವಿಷಯವಾಗಿ ಅಮ್ಮನಿಗೂ ಮಾವನಿಗೂ ಚರ್ಚೆಯೂ ನಡೆದಿತ್ತು.

ಬ್ಯಾಂಡಿನವರು, ಓಲಗದವರು, ಪಿಳ್ಳಂಗೋವಿಯವರು ಮೊದಲಾಗಿ ಎಷ್ಟು ತರಹದ ಉಚ್ಚ ಶಬ್ದಗಳನ್ನು ಮಾಡುವ ವಾದ್ಯದವರು ಸಿಗಬಹುದೋ ಅವರೆಲ್ಲರನ್ನೂ ಕರೆಸಿ ವಿಚಿತ್ರ ಕೋಲಾಹಲದಿಂದ, ಮದಗಜದ ಧ್ವನಿಯಂತಹ ಸಂಗೀತ ಸ್ವರಗಳಿಂದ ಸರಸ್ವತಿಯ ಪದ್ಮವನವನ್ನೇ ಧ್ವಂಸ ಮಾಡುತ್ತಾ ಮೆರವಣಿಗೆ ಹೊರಟಂತಿತ್ತು. ನಾನು ಮದುವೆಯ ಮನೆಯನ್ನು ಸೇರಿದೆನು. ಉಂಗುರಗಳು, ಹಾರಗಳು, ಜರಿಪಂಚೆಗಳು, ರತ್ನ ಕೆತ್ತಿದ್ದ ಒಡವೆಗಳು ಇವೆಲ್ಲವುಗಳಿಂದ ನನ್ನ ಮೈ ಹರಾಜಿಗಿಟ್ಟಿರುವ ಒಡವೆಯ ಅಂಗಡಿಯ ಹಾಗಿತ್ತು. ಹೆಣ್ಣಿನವರಿಗೆ ಭವಿಷ್ಯತ್ತಿನ ಅಳಿಯ ದೇವರ ಬೆಲೆಯೆಷ್ಟು ಎಂಬುದನ್ನು ಅಂಗಾಗಗಳಲ್ಲಿಯೂ ಸ್ಪಷ್ಟವಾಗಿ ತೋರಿಸಬೇಕೆಂಬುದೇ ಪ್ರಾಯಶಃ ನಮ್ಮವರ ಅಭಿಪ್ರಾಯವಾಗಿದ್ದಿರಬೇಕು.

ಮದುವೆಯ ಮನೆ ಹೊಕ್ಕಾಗ ಮಾವನಿಗೆ ತೃಪ್ತಿಯಾಗಲಿಲ್ಲ. ಒಂದನೆಯದು ಗಂಡಿನ ಕಡೆಯವರಿಗೆ ಅಲ್ಲಿ ಜಾಗ ಸಾಲುತ್ತಿರಲಿಲ್ಲ. ಎರಡನೆಯದಾಗಿ ಮಾಡಿದ್ದ ಏರ್ಪಾಡೆಲ್ಲಾ ಅತಿ ಸಾಮಾನ್ಯ. ಶಂಭುನಾಥ ಬಾಬುಗಳ ವ್ಯವಹಾರವೂ ಅಷ್ಟು ಚಟುವಟಿಕೆಯದಾಗಿರಲಿಲ್ಲ. ಅವರ ವಿನಯವೇನೂ ಅಂತಹ ಹೆಚ್ಚಿನದಲ್ಲ. ಬಾಯಿಂದ ಮಾತೂ ಹೊರಡುತ್ತಿರಲಿಲ್ಲ. ಸೊಂಟಕ್ಕೆ ವಲ್ಲಿಯನ್ನು ಸುತ್ತಿಕೊಂಡು ಗಂಟಲೊಡೆದ ಬಕ್ಕದಲೆಯ ಕರಿಯ ದಪ್ಪ ವ್ಯಕ್ತಿಯೊಬ್ಬರು ಹೆಣ್ಣಿನ ಕಡೆಯವರಾಗಿ ಓಡಾಡು

ತ್ತಿದ್ದರು. ಅವರು ವಕೀಲರಂತೆ. ಶಂಭುನಾಥಬಾಬುಗಳ ಸಹಪಾಠಿಗಳಾಗಿದ್ದರಂತೆ. ಅವರು ಅತಿ ನಮ್ರತೆಯಿಂದ—ಸ್ಮಿತಹಾಸ್ಯದೊಡನೆ ಗದ್ಗದ ವಚನದೊಡನೆ ತಾವು ಕಂಡ ಗಂಡಿನ ಕಡೆಯವರನ್ನು ಉಪಚರಿಸಿ ಸತ್ಕರಿಸದಿದ್ದರೆ ಆರಂಭದಲ್ಲೇ ಜಗಳ ಆರಂಭವಾಗಿ ಬಿಡುತ್ತಿತ್ತು. ನಾನು ಹೋಗಿ ಹಸೆಯ ಮೇಲೆ ಕುಳಿತ ಒಂದು ಅರೆಘಳಿಗೆಯೊಳಗೆ ಮಾವ ಶಂಭುನಾಥಬಾಬುಗಳನ್ನು ಹತ್ತಿರದ ಕೊಟಡಿಯೊಂದಕ್ಕೆ ಕರೆದುಕೊಂಡು ಹೋದನು. ಮಾತುಕತೆ ಏನು ನಡೆಯಿತೋ ನಾನರಿಯೆ—ಸ್ವಲ್ಪ ಹೊತ್ತಾದ ನಂತರ ಶಂಭುನಾಥಬಾಬುಗಳು ಬಂದು ನನ್ನನ್ನು ಕರೆದರು.

ಸಮಾಚಾರವಿಷ್ಟೆ—ಒಬ್ಬೊಬ್ಬ ಮನುಷ್ಯರಿಗೆ ಒಂದೊಂದು ವಿಧವಾದ ಹುಚ್ಚಿರುವುದು. ಮಾವನಿಗೆ ಒಂದು ಹುಚ್ಚಿತ್ತು. ಯಾರಿಂದಲೂ ಮೋಸ ಹೋಗಕೂಡದೆಂಬುದು ಅವನ ಹಟ....ಬೀಗರು ಹೆಣ್ಣಿಗೆ ಹಾಕುವ ಒಡವೆಯ ವಿಷಯದಲ್ಲಿ ಮೋಸ ಮಾಡುವರೆಂದು ಅವನಿಗೆ ಹೆದರಿಕೆ. ಹಾಗೆ ಒಂದು ವೇಳೆ ಅವರು ಮೋಸ ಮಾಡಿದರೆ ಮದುವೆಯಾದನಂತರ ಅದನ್ನು ಸರಿಪಡಿಸುವುದು ಅಸಾಧ್ಯ. ಅದಕ್ಕಾಗಿ ಅವನು ಅಕ್ಕಸಾಲಿಗನನ್ನೂ ಕರೆದುಕೊಂಡು ಬಂದು ಕುಳಿತಿದ್ದನು. ಕೊಟಡಿಯೊಳಕ್ಕೆ ಹೋದಾಗ ಮಾವ ಒಂದು ಕುರ್ಚಿಯ ಮೇಲೆ ಕುಳಿತಿದ್ದನು. ಹತ್ತಿರದಲ್ಲೇ ಅಕ್ಕಸಾಲೆಯು ತಕ್ಕಡಿ, ಬಟ್ಟುಗಳು, ಒರೆಗಲ್ಲು ಎಲ್ಲವನ್ನೂ ಸಿದ್ಧವಾಗಿಟ್ಟುಕೊಂಡು ಕುಳಿತಿದ್ದನು.

ಶಂಭುನಾಥಬಾಬುಗಳು ನನ್ನೊಡನೆ ಹೀಗೆಂದರು "ವಿವಾಹದ ಕೆಲಸ ಪ್ರಾರಂಭವಾಗುವ ಮುಂಚೆ ಎಲ್ಲ ಒಡವೆಗಳನ್ನೂ ಅಕ್ಕಸಾಲೆಯ ಮೂಲಕ ಪರೀಕ್ಷೆ ಮಾಡಿಸಬೇಕೆಂದು ನಿಮ್ಮ ಮಾವ ಹೇಳುತ್ತಿರುವರು. ಇದಕ್ಕೆ ನಿನ್ನ ಅಭಿಪ್ರಾಯವೇನು?" ಎಂದರು.

ನಾನು ತಲೆ ತಗ್ಗಿಸಿಕೊಂಡು ಸುಮ್ಮನಿದ್ದೆನು. "ಅವನ ಅಭಿಪ್ರಾಯ ವೇನಿದೆ? ನಾನು ಹೇಗೆ ಹೇಳಿದರೆ ಅವನು ಹಾಗೆ ಕೇಳುತ್ತಾನೆ—" ಎಂದು ಮಾವ ಹೇಳಿದನು.

ಶಂಭುನಾಥಬಾಬುಗಳು ನನ್ನ ಕಡೆ ತಿರುಗಿ—"ಹಾಗಾದರೆ ಸರಿ—

ಅವರು ಏನು ಹೇಳಿದರೆ ನೀನು ಅದಕ್ಕೆ ಒಪ್ಪುವೆ. ಈ ವಿಷಯವಾಗಿ ನೀನೇನೂ ಹೇಳುವಂತಿಲ್ಲವಲ್ಲ—" ಎಂದರು.

ನಾನು ಸ್ವಲ್ಪವಾಗಿ ಮೈ ಅಲುಗಿಸುವುದರ ಮೂಲಕ 'ಈ ವಿಷಯದಲ್ಲಿ ನನ್ನ ಅಭಿಪ್ರಾಯದ ಅವಶ್ಯಕತೆಯೇ ಇಲ್ಲ' ಎಂದು ಸೂಚಿಸಿದೆ.

"ಅವನೇಕೆ ಇಲ್ಲಿ, ಅವನು ಹೋಗಿ ಸಭೆಯಲ್ಲಿ ಕುಳಿತುಕೊಳ್ಳಲಿ" ಎಂದು ಮಾವ ಹೇಳಿದನು. ಅದಕ್ಕೆ ಶಂಭುನಾಥಬಾಬುಗಳು—"ಸಭೆಯಲ್ಲೇಕೆ? ಇಲ್ಲೇ ಕುಳಿತಿರಲಿ" ಎಂದರು.

ಸ್ವಲ್ಪ ಹೊತ್ತಾದನಂತರ ವಸ್ತ್ರವೊಂದರಲ್ಲಿ ಒಡವೆಗಳನ್ನು ಕಟ್ಟಿಕೊಂಡು ಬಂದು ಅಲ್ಲಿದ್ದ ಬೆಂಚಿನ ಮೇಲಿಟ್ಟರು—ಎಲ್ಲ ಅವರ ಅಜ್ಜನ ಕಾಲದ ಒಡವೆಗಳು. ಈ ಕಾಲದ ನಾಜೋಕು ಒಡವೆಗಳಲ್ಲ. ಎಲ್ಲ ಒಳ್ಳೆ ಭಾರವಾಗಿ ಮಜಬೂತಾದ ಒಡವೆಗಳು.

ಅಕ್ಕಸಾಲೆ ಅವನ್ನು ಕೈಯಲ್ಲಿ ಎತ್ತಿನೋಡಿ ಹಾಗೆಯೇ ಕೆಳಗಿಟ್ಟು "ಇವನ್ನೇನು ನೋಡುವುದು. ಇವುಗಳಲ್ಲಿ ಬೆಸಿಗೆಯಿಲ್ಲ, ಪುಡಿಯಿಲ್ಲ. ಈ ಕಾಲವಲ್ಲಿ ಇಂತಹ ಭಂಗಾರ ಸಿಕ್ಕುವುದೇ ಅಪೂರ್ವ" ಎಂದ.

ಮಾವ ಒಂದು ನೋಟುಬುಕ್ಕನ್ನು ತೆಗೆದು ಒಡವೆಗಳ ಪಟ್ಟಿಯನ್ನು ಗುರುತು ಹಚ್ಚಿಕೊಂಡನು. ಆಮೇಲೆ ಅವುಗಳಲ್ಲಿ ಯಾವುದಾದರೂ ಮೋಸವಾಗದಂತಿರಲೆಂದು ಅವನ ಅಭಿಪ್ರಾಯ. ಲೆಕ್ಕಹಾಕಿ ನೋಡಿದಾಗ ಮುಂಚೆ ಕೊಡುವುದಾಗಿ ಒಪ್ಪಂದವಾಗಿದ್ದುದಕ್ಕಿಂತ ಹೆಚ್ಚು ಬೆಲೆಯ ಒಡವೆಗಳು ಇದ್ದುವು.

ಒಡವೆಗಳಲ್ಲಿ ಒಂದು ಜೊತೆ ಬೆಂಡೋಲೆಗಳಿದ್ದವು. ಶಂಭುನಾಥ ಬಾಬುಗಳು ಅವನ್ನು ತೆಗೆದು ಅಕ್ಕಸಾಲೆಯ ಕೈಗೆ ಕೊಟ್ಟರು. 'ಇವು ಈ ಕಾಲದ ತಯಾರಿ—ಶೀಮೆ ಕಲ್ಲುಗಳು. ಇವುಗಳಲ್ಲಿ ಚಿನ್ನವೂ ಕಡಿಮೆ' ಎಂದು ಅವನು ಹೇಳಿದನು.

ಶಂಭುನಾಥಬಾಬುಗಳು ಅವನ್ನು ಮಾವನ ಹತ್ತಿರ ಕೊಟ್ಟು—'ಇವು ನಿಮ್ಮ ಹತ್ತಿರವೇ ಇರಲಿ' ಎಂದರು.

ಮಾವ ಅವನ್ನೆತ್ತಿಕೊಂಡು ನೋಡಿದಾಗ—ಹೆಣ್ಣನ್ನು ನೋಡಿ ಹೋಗಿದ್ದಾಗ ನಮ್ಮವರು ಕೊಟ್ಟಿದ್ದುದೆಂದು ಗೊತ್ತಾಯಿತು. ಮಾವನ

ಮುಖ ಕೆಂಪಗಾಯಿತು. 'ಅವರು ತನ್ನನ್ನು ಮೋಸಮಾಡಲು ಯತ್ನಿಸುವರು. ತಾನು ಮೋಸ ಹೋಗೆನು' ಎಂದು ಆನಂದಿಸಲು ಆಶಿಸುತ್ತಿದ್ದನು. ಆದರೆ ಅಂತಹ ಆನಂದದಿಂದ ವಂಚಿತನಾದನು. ಅಷ್ಟೇ ಅಲ್ಲ ಅವನ ಮೇಲೆಯೇ ನಾಚಿಕೆಯ ಹೊರೆ ಹೊರಿಸಿದರು. ಮುಖವನ್ನು ಭಾರವಾಗಿ ಮಾಡಿಕೊಂಡು ನನ್ನ ಕಡೆಗೆ ತಿರುಗಿ 'ಅನುಪಮ್, ಹೋಗು. ನೀನಿನ್ನು ಹೋಗಿ ಸಭೆಯಲ್ಲಿ ಕುಳಿತುಕೋ' ಎಂದನು.

ಶಂಭುನಾಥಬಾಬುಗಳು—'ಬೇಡ, ಈಗೇನೂ ಸಭೆಯಲ್ಲಿ ಕುಳಿತುಕೊಳ್ಳಬೇಕಾದ ಅವಶ್ಯಕತೆಯಿಲ್ಲ. ನಡಿಯಿರಿ. ಮೊದಲು ನಿಮಗೆಲ್ಲ ಭೋಜನವಾಗಲಿ' ಎಂದರು.

"ಅದು ಹೇಗೆ? ಲಗ್ನ—?" ಎಂದು ಮಾವನು ಕೇಳತೊಡಗಿದನು.

'ಅದರ ವಿಷಯ ಯೋಚಿಸಬೇಡಿರಿ. ಮುಂಚೆ ಊಟಕ್ಕೆ ಏಳಿ' ಎಂದರು.

ಮನುಷ್ಯ ಸಂಪೂರ್ಣ ಸಾಧುವಂತೆ ಕಂಡರೂ ಒಳಗೊಳಗೇ ಬಲವಿರುವರೆಂದು ಎಲ್ಲರಿಗೂ ಸ್ಪಷ್ಟವಾಗುತ್ತಿತ್ತು. ಮಾವ ಏಳಲೇಬೇಕಾಯಿತು. ಗಂಡಿನ ಕಡೆಯವರಿಗೆಲ್ಲಾ ಊಟವಾಯಿತು. ಆಡಂಬರದ ಏರ್ಪಾಡೇನೂ ಇರಲಿಲ್ಲ. ಆದರೆ ಅಡಿಗೆ ಬಹು ಚೆನ್ನಾಗಿತ್ತು. ಬಡಿಸುವುದರಲ್ಲೂ ಬಹು ಒಪ್ಪವೂ ವಿಚಕ್ಷಣೆಯೂ ಇತ್ತು.

ಗಂಡಿನ ಕಡೆಯವರೆಲ್ಲಾ ಊಟ ಮಾಡಿದನಂತರ ಶಂಭುನಾಥಬಾಬುಗಳು ನನ್ನ ಕಡೆ ತಿರುಗಿ ಊಟ ಮಾಡ ಹೇಳಿದರು. ಮಾವ ಅದಕ್ಕೆ 'ಅದು ಹೇಗೆ ಸಾಧ್ಯ? ವಿವಾಹಕ್ಕೆ ಮುಂಚೆ ವರನಿಗೆಲ್ಲಿಯ ಊಟ?' ಎಂದನು. ಈ ವಿಷಯದಲ್ಲಿ ಮಾವನ ಮಾತಿಗೆ ಲಕ್ಷ್ಯವನ್ನೇ ಕೊಡದೆ ಶಂಭುನಾಥಬಾಬುಗಳು ನನ್ನ ಕಡೆಗೆ ತಿರುಗಿ–'ಏನು, ಊಟ ಮಾಡಲು ಏನಾದರೂ ಆಕ್ಷೇಪಣೆಯಿದೆಯೋ?' ಎಂದರು.

ಮಾತೃ ಆಜ್ಞೆಯ ಪ್ರತ್ಯಕ್ಷ ಮೂರ್ತಿಯಂತೆ ಮಾವನು ಇದಿರಿನಲ್ಲಿ ನಿಂತಿರುವಾಗ ನಾನೇನು ಬಾಯಿಬಿಡಬಲ್ಲೆನೇ. ನಾನು ಊಟಕ್ಕೆ ಕುಳಿತುಕೊಳ್ಳಲಿಲ್ಲ.

ಆಗ ಶಂಭುನಾಥಬಾಬುಗಳು ಮಾವನ ಕಡೆಗೆ ತಿರುಗಿ–'ನಿಮಗೆಲ್ಲಾ ಬಹು ಶ್ರಮ ಕೊಟ್ಟೆನು. ನಿಮ್ಮಗಳ ಅಂತಸ್ತಿಗೆ ತಕ್ಕಂತೆ ಏರ್ಪಾಡು ಮಾಡಲಾರದವನು ನಾನು. ಕ್ಷಮಿಸಿರಿ. ರಾತ್ರಿ ಬಹು ಹೊತ್ತಾಯಿತು. ಇನ್ನು ನಿಮಗೆ ಹೆಚ್ಚು ಕಷ್ಟ ಕೊಡಲು ಇಷ್ಟವಿಲ್ಲ. ದಯವಿಟ್ಟು—

'ನಾವೆಲ್ಲ ಸಿದ್ಧರಾಗಿರುವೆವು. ಸಭೆಗೆ ನಡೆಯಿರಿ' ಎಂದು ಮಾವನು ಹೇಳಿದನು.

'ಹಾಗಾದರೆ ನಿಮ್ಮ ಗಾಡಿಗಳನ್ನು ಕರೆಸಲೇ' ಎಂದು ಶಂಭುನಾಥರು ಕೇಳಿದರು. ಮಾವ ಆಶ್ಚರ್ಯದಿಂದ 'ಏನು ಹಾಸ್ಯ ಮಾಡುತ್ತೀರೇನು?' ಎಂದನು.

"ಹಾಸ್ಯವನ್ನು ಆರಂಭ ಮಾಡಿದವರು ನೀವೇ. ಅದರ ಮೂಲವನ್ನು ಸ್ಥಿರಪಡಿಸಲು ನನಗೆ ಇಷ್ಟವಿಲ್ಲ" ಎಂದು ಶಂಭುನಾಥರು ಹೇಳಿದರು.

ಮಾವ ಎರಡು ಕಣ್ಣುಗಳನ್ನೂ ದೊಡ್ಡದಾಗಿ ಮಾಡಿಕೊಂಡು ನೋಡುತ್ತಾ ನಿಂತಿದ್ದನು—"ನನ್ನ ಮಗಳ ಒಡವೆಯನ್ನು ನಾನು ಕದಿಯುವೆನೆಂದು ಭಾವಿಸುವವರ ಮನೆಗೆ ನನ್ನ ಮಗಳನ್ನು ಖಂಡಿತ ಕೊಡೆನು" ಎಂದು ಶಂಭುನಾಥಬಾಬುಗಳು ಹೇಳಿದರು. ನನ್ನೊಡನೆ ಒಂದು ಮಾತನ್ನಾದರೂ ಆಡುವ ಅವಶ್ಯಕತೆಯಿದೆಯೆಂದು ಅವರೆಣಿಸಲಿಲ್ಲ. ಏಕೆಂದರೆ ನಾನು ಯಾವ ಲೆಕ್ಕಕ್ಕೂ ಸೇರಿದವನಲ್ಲವೆಂದು ಅವರಿಗೆ ಪ್ರಮಾಣವಾಗಿಬಿಟ್ಟಿತು.

ಆಮೇಲೆ ನಡೆದ ಮಾತುಕತೆಗಳನ್ನು ಹೇಳಲು ನನಗೆ ಇಷ್ಟವಿಲ್ಲ. ಬಿರುಗಾಳಿಯಂತೆ ಲಾಂಟೀನ ಬೆಳಕಿನಲ್ಲಿ ಸಾಮಾನುಗಳನ್ನು ಉರುಳಿಸುತ್ತಾ, ಕೆಡವುತ್ತಾ, ಸಿಕ್ಕಾಪಟ್ಟೆ ಕಟ್ಟಿಕೊಂಡು ಗಂಡಿನವರ ಗುಂಪು ದಕ್ಷಯಜ್ಞಕ್ಕೆ ಬಂದಿದ್ದ ದೇವಗಣಗಳಂತೆ ನಡೆದರು

ಮನೆಗೆ ಹಿಂದಿರುಗುವಾಗ ಓಲಗ, ಬ್ಯಾಂಡು ಏನೂ ಇರಲಿಲ್ಲ. ಮೋಡಗಳು ಆಕಾಶದ ನಕ್ಷತ್ರಗಳನ್ನೆಲ್ಲಾ ಮುಚ್ಚಿಬಿಟ್ಟಿದ್ದವು.

೩

ಮನೆಯವರೆಲ್ಲ ಕೋಪಗೊಂಡು ಕಿಡಿಕಿಡಿಯಾಗಿದ್ದರು. "ಹೆಣ್ಣಿನ ತಂದೆಗೆ ಇಷ್ಟು ಗರ್ವವೇ. ಕಲಿಕಾಲ. ಪೂರ್ಣ ಕಲಿಕಾಲ! ಇರಲಿ.

ಆ ಹೆಣ್ಣಿಗೆ ಹೇಗೆ ತಾನೆ ಮದುವೆ ಮಾಡುವನು ನೋಡೋಣ” ಎಂದು ಎಲ್ಲರೂ ಹೇಳುತ್ತಿದ್ದರು. ಆದರೆ ಮಗಳ ಮದುವೆ ಆಗುವುದಿಲ್ಲವೆಂಬ ಹೆದರಿಕೆಯೇ ಇಲ್ಲದವರಿಗೆ ಏನು ತಾನೆ ಶಿಕ್ಷೆ ಮಾಡಲಾದೀತು?

ಇಡೀ ಬಂಗಾಲದಲ್ಲಿ ಮದುವೆಯ ಚಪ್ಪರದಿಂದ ಸ್ವತಃ ಹೆಣ್ಣಿನ ತಂದೆಯಿಂದಲೇ ಹೊರಕ್ಕೆ ಕಳುಹಿಸಲ್ಪಟ್ಟ ಗಂಡು ನಾನೊಬ್ಬನೇ–ಇಂತಹ ಸತ್ಪಾತ್ರನ ತಲೆಯ ಮೇಲೆ ಇಂತಹ ಕಳಂಕದ ಹೊರೆ ಹೊರಿಸಬೇಕೇ ಎಂದು ಬಂದಿದ್ದ ನೆಂಟರು ಹಣೆ ಚಚ್ಚಿಕೊಂಡರು. ‘ಮದುವೆಯಾಗಲಿಲ್ಲ. ನಮ್ಮನ್ನೆಲ್ಲಾ ಮೋಸಮಾಡಿ ಊಟಕ್ಕೆ ಕೂರಿಸಿದರು. ತಿಂದ ತಿಂಡಿಯನ್ನೆಲ್ಲಾ ಹೊಟ್ಟೆಯಿಂದ ತೆಗೆದು ಅಲ್ಲಿಯೇ ಬಿಸಾಟು ಬಂದಿದ್ದರೆ ಚೆನ್ನಾಗಿರುತ್ತಿತ್ತು’ ಎಂದರು. ಮದುವೆಯ ಮಾತು ತಪ್ಪಿದ್ದಕ್ಕೂ ಮಾನಭಂಗ ಮಾಡಿದ್ದಕ್ಕೂ ವ್ಯಾಜ್ಯ ಹೂಡುವುದಾಗಿ ಮಾವ ಹೇಳಿದನು. ಹಾಗೆ ಮಾಡಿದರೆ ತಮಾಷೆಯಲ್ಲಿ ಉಳಿದಿರುವದು ಪೂರ್ತಿಯಾದಂತಾಗುವುದೆಂದು ಹಿತೈಷಿಗಳು ಸಮಾಧಾನ ಹೇಳಿದರು.

ನನಗೂ ಬಹು ಕೋಪ ಬಂದಿತ್ತೆಂಬ ಸಂಗತಿ ಹೇಳಬೇಕಾಗಿಲ್ಲ. ಯಾವ ರೀತಿಯಲ್ಲಾದರೂ ಶಂಭುನಾಥಬಾಬುಗಳು ನನ್ನ ಕಾಲಿಗೆ ಬಿದ್ದು ಬೇಡಿಕೊಂಡು ಮದುವೆ ಮಾಡಿಯೇ ಮಾಡುವರು ಎಂದಂದುಕೊಂಡು ಆಗತಾನೆ ಕಾಣತೊಡಗಿದ್ದ ಮೀಸೆಯ ರೇಖೆಯ ಮೇಲೆ ಕೈಯಾಡಿಸುತ್ತ ಮನಸ್ಸಿನ ಮುಂಡಿಗೆ ಎಣಿಸುತ್ತಿದ್ದೆ.

ಆದರೆ ಈ ಕೋಪದ ಪ್ರವಾಹದ ಸಂಗಡವೇ ಇನ್ನೊಂದು ಪ್ರವಾಹವೂ ಇತ್ತು. ನನ್ನ ಮನಸ್ಸೆಲ್ಲಾ ಆ ಅಪರಿಚಿತೆಯನ್ನು ಹೊಂದಲು ಹಾತೊರೆಯುತ್ತಿತ್ತು. ಈಗಲೂ ಆ ಆಶೆಯನ್ನು ಹಿಂದಿರುಗಿಸಲು ಸಾಧ್ಯವಿಲ್ಲ. ಅವಳ ಹಣೆಯಲ್ಲಿದ್ದ ಚಂದನರೇಖೆ, ಮೈ ಮೇಲಿನ ಹಳದಿ ಸೀರೆ, ಮುಖದಲ್ಲಿ ಲಜ್ಜೆಯ ನಸುಗೆಂಪು ಇವೆಲ್ಲವೂ ನೆನಪಾಗಿ ನನ್ನ ಹೃದಯದಲ್ಲಿ ಉಂಟಾಗುತ್ತಿದ್ದ ವಿಚಿತ್ರ ಅನುರಾಗದ ಭಾವಗಳನ್ನು ವರ್ಣಿಸುವುದು ಹೇಗೆ ಸಾಧ್ಯ! ನನ್ನ ಕಲ್ಪನಾಲೋಕದ ಕಲ್ಪಲತೆಯು ವಸಂತದ ಸಮಸ್ತ ಹೂಗಳ ಭಾರವನ್ನು ನನಗೆ ನಿವೇದನ ಮಾಡಿಬಿಡುವ ಆಶೆಯಲ್ಲಿ ತಲೆಬಾಗಿ ನಿಂತಿದೆ. ಗಾಳಿ ಬೀಸುವುದು. ಪರಿಮಳ ಬೀರುವುದು, ಎಲೆಗಳ

ಶಬ್ದ ಕೇಳುವುದು. ಆದರೆ, ಆ ವಧುವಿನ ಹೆಜ್ಜೆಯ ಸಪ್ಪಳವೊಂದು ಮಾತ್ರ ಅವಶ್ಯಕ. ಈ ಸಮಯದಲ್ಲಿ ಆ ಹೆಜ್ಜೆಯ ಸದ್ದಿನ ದೂರ ಕ್ಷಣ ಮಾತ್ರದಲ್ಲಿ ಮತ್ತೂ ದೂರವಾಯಿತು.

ಇಷ್ಟು ದಿನ ಪ್ರತಿದಿನ ಸಂಜೆ ವಿನೂ ದಾದಾನ* ಮನೆಗೆ ಹೋಗಿ ಹುಡುಗಿಯ ವಿಷಯವಾಗಿ ಅವನ ಸಂಗಡ ಮಾತನಾಡಿ ಅವನಿಗೆ ಬೇಜಾರುಪಡಿಸಿದ್ದೆ. ಅವನು ಮಾತಿನಲ್ಲಿ ಬಹು ನಿಪುಣ. ಆದ್ದರಿಂದಲೋ ಏನೋ ಅವನ ಮಾತುಗಳು ನನ್ನ ಮನಸ್ಸಿನಲ್ಲಿ ಬಾಲಚುಕ್ಕಿಗಳಂತೆ ಉರಿಯುತ್ತಿದ್ದುವು. ಹುಡುಗಿ ಅತಿ ರೂಪವತಿಯೆಂದು ಅರಿತಿದ್ದೆ. ಆದರೆ ಅವಳನ್ನು ನೋಡಲಿಲ್ಲ. ಅವಳ ಚಿತ್ರವನ್ನೂ ಕಾಣಲಿಲ್ಲ. ಎಲ್ಲವೂ ಅಸ್ಪಷ್ಟವಾಗಿತ್ತು. ಹೊರಗಂತೂ ಅವಳನ್ನು ಕಾಣಲಿಲ್ಲ. ಆದರೆ ಮನಸ್ಸಿನಲ್ಲೂ ಅವಳ ರೂಪವನ್ನು ನೆಲೆಗೊಳಿಸುವುದು ಸಾಧ್ಯವಾಗಲಿಲ್ಲ. ಈ ಕಾರಣದಿಂದಲೇ ನನ್ನ ಮನಸ್ಸು ಅಂದಿನ ವಿವಾಹದ ಸಭೆಯ ತೆರೆಯ ಮರೆಯಲ್ಲೇ ಭೂತದಂತೆ ಸಂಚರಿಸ ತೊಡಗಿತು.

ಹುಡುಗಿ ನನ್ನ ಫೋಟೋ ನೋಡಿದ್ದಳೆಂದು ಹರೀಶ ಹೇಳಿದ್ದ. ಅವಳು ಒಪ್ಪಿಯೂ ಇದ್ದಳೆಂದು ಅರಿತಿದ್ದೆ. ಒಪ್ಪದಿರಲು ಕಾರಣವೇನೂ ಇರಲಿಲ್ಲ. ನನ್ನ ಫೋಟೋ ಅವಳ ಪೆಟ್ಟಿಗೆಗಳೊಂದರಲ್ಲಿ ಅಡಗಿದೆಯೆಂದು ನನಗೆ ಅನಿಸಿತು. ಅವಳು ತನ್ನ ಕೊಟಡಿಯಲ್ಲಿ ಒಂಟಿಯಾಗಿ ಕುಳಿತು ಮಧ್ಯಾಹ್ನದ ವೇಳೆಯಲ್ಲಿ ಅದನ್ನು ಹೊರಗೆ ತೆಗೆದು ನೋಡುವುದಿಲ್ಲವೇ? ಅವಳು ಅದನ್ನು ಏಕಾಗ್ರದೃಷ್ಟಿಯಿಂದ ನೋಡುವಾಗ ಅವಳ ಮುಖದ ಎರಡು ಭಾಗಗಳಿಂದ ಅವಳ ತಲೆಯ ಕೂದಲು ಜಾರಿ ಆ ಚಿತ್ರದ ಮೇಲೆ ಬೀಳದೇ ? ಆಕಸ್ಮಾತಾಗಿ ಕೋಟಡಿಯ ಹೊರಗೆ ಯಾರಾದರೂ ನಡೆಯುವ ಶಬ್ದವನ್ನು ಕೇಳಿ ಅವಳು ಆ ಚಿತ್ರವನ್ನು ಮುಚ್ಚಿಡಲು ಯತ್ನಿಸಿ ಅವಸರದಿಂದ ತನ್ನ ಸುಗಂಧವಾದ ಸೆರಗಿನಲ್ಲಿ ಬಚ್ಚಿಡಳೇ." ಎಂದು ಹೀಗೆ ಹಲವಾರು ಕನಸುಗಳು ನನ್ನ ಮನಸ್ಸಿನಲ್ಲಿ ತಲೆ ಹಾಕುತ್ತಿದ್ದುವು.

---

* ದಾದಾ–ಅಣ್ಣ.

ದಿನಗಳು ಕಳೆದವು. ಒಂದು ವರ್ಷ ಕಳೆಯಿತು. ಮಾವನಂತೂ ನಾಚಿಕೆಯಿಂದ ಮದುವೆಯ ಸುದ್ದಿಯನ್ನೇ ಎತ್ತಲಾರದಿದ್ದನು. ಜನರು ಅವಮಾನದ ಸುದ್ದಿಯನ್ನು ಸ್ವಲ್ಪ ಮರೆತನಂತರ ಮತ್ತೆ ಮದುವೆಗೆ ಯತ್ನಿಸಬೇಕೆಂದು ಅಮ್ಮ ನಿಶ್ಚಯಿಸಿದ್ದಳು.

ಅತ್ತ ಆ ಹುಡುಗಿ ಇನ್ನೊಂದು ಉತ್ತಮ ವರವನ್ನು ಗೊತ್ತುಮಾಡಿದ್ದರೂ ಮದುವೆಯನ್ನೇ ಮಾಡಿಕೊಳ್ಳೆನೆಂದು ಹಟಹಿಡಿದಿರುವುದೆಂದು ಕೇಳಿದೆನು. ಈ ವಿಷಯ ಕೇಳಿ ನನಗೆ ಬಹು ಆನಂದವಾಯಿತು. ನನ್ನ ಮನಸ್ಸಿನಲ್ಲಿ ಹಲವು ಕಲ್ಪನೆಗಳು ತೋರತೊಡಗಿದುವು. ಆ ಹುಡುಗಿ ಹೊಟ್ಟೆ ತುಂಬ ಊಟ ಮಾಡಳು. ಸಂಜೆಯಾಗಿದ್ದರೂ ಅವಳು ತಲೆ ಬಾಚಿ ಹೆಣೆದುಕೊಳ್ಳುವುದನ್ನೇ ಮರೆತಿರುವಳು. ಅವಳ ತಂದೆ ಮಗಳ ಮುಖದ ಕಡೆ ನೋಡಿ ನನ್ನ ಮಗಳು ದಿನೇದಿನೇ ಹೀಗೇಕೆ ಬಡವಾಗುತ್ತಿರುವಳು – ಎಂದು ಯೋಚಿಸುತ್ತಿರುವನು. ಒಂದು ದಿನ ಆತ ಅಕಸ್ಮಾತ್ತಾಗಿ ಮಗಳ ಕೊಟಡಿಗೆ ಹೋದಾಗ ಅವಳು ಕಣ್ಣೀರು ಸುರಿಸುತ್ತಿರುವುದನ್ನು ಕಾಣುವನು. 'ಮಗೂ, ನಿನಗೇನಾಗಿದೆ ಹೇಳಮ್ಮ' ಎಂದು ವಿಚಾರಿಸುವನು. ಹುಡುಗಿ ಅವಸರದಿಂದ ಕಣ್ಣೊರಸಿಕೊಳ್ಳುತ್ತ 'ಏನೂ ಇಲ್ಲ ಅಪ್ಪ', ಎಂದು ಹೇಳುವಳು. ತಂದೆಗೆ ಒಬ್ಬಳೇ ಮಗಳು. ಅವಳೆಂದರೆ ಆತನಿಗೆ ಪ್ರಾಣ. ಅನಾವೃಷ್ಟಿಯ ದಿನದ ಹೂಗಿಡದಂತೆ ಅವಳು ದಿನದಿನಕ್ಕೆ ಒಣಗತೊಡಗಿದರೆ ಅವನ ಮನಸ್ಸು ಹೇಗೆ ತಾನೆ ಸಹಿಸೀತು. ಆಗ ಅವನು ಅಭಿಮಾನವನ್ನು ದೂರ ಮಾಡಿ ಹೊರಟು ನೆಟ್ಟಗೆ ನಮ್ಮ ಮನೆಯ ಬಾಗಿಲಿಗೆ ಬರುವನು. ಆಮೇಲೋ? ಅನಂತರ ಮನಸ್ಸಿನಲ್ಲೇ ಹರಿಯುತ್ತಿದ್ದ ಕಾಳವರ್ಣದ ಆ ಇನ್ನೊಂದು ಹುಚ್ಚು ಹೊಳೆ ಹರಿಯತೊಡಗಿತು. ಅದು ಕಾಳಸರ್ಪದಂತೆ ಬುಸಗುಟ್ಟುತ್ತಾ ಹೇಳತೊಡಗಿತು. 'ಸರಿ, ಸೊಗಸಾಯಿತು ಬಿಡು, ಮತ್ತೊಮ್ಮೆ ವಿವಾಹದ ಏರ್ಪಾಡು. ದೀಪಗಳ ಸಂಭ್ರಮ. ದೇಶ ದೇಶಾಂತರದ ನೆಂಟರಿಷ್ಟರಿಗೆ ಕರೆ. ಆಮೇಲೆ ನೀನು ಮದುವೆಯ ಗಂಡಿನ ವೇಷ ಹಾಕಿಕೊಂಡು ಹೋಗಿ ಬಾಸಿಂಗವನ್ನು ಕಿತ್ತುಹಾಕಿ ನಿಮ್ಮ ಗುಂಪಿನವರೆಲ್ಲರೊಡನೆ ಮನೆಗೆ ಹೊರಟು ಬಾ' ಎಂದಿತು. ಆದರೆ ಮನಸ್ಸಿನಲ್ಲಿ ಪ್ರವಹಿಸುತ್ತಿದ್ದ ಕಣ್ಣೀರಿನಂತೆ ಇದ್ದ

ಶುಭ್ರಧಾರಿಯಾದರೋ ರಾಜಹಂಸದ ರೂಪವನ್ನು ಧರಿಸಿ ಹೇಳತೊಡಗಿತು. 'ನಾನು ಹಿಂದೆ ದಮಯಂತಿಯ ಪುಷ್ಪವನಕ್ಕೆ ಹೋಗಿದ್ದೆನಲ್ಲಾ ಹಾಗೆಯೇ ನನಗೊಮ್ಮೆ ಹಾರಿಹೋಗಲು ಅವಕಾಶ ಕೊಡು. ಹೇಗಾದರೂ ಮಾಡಿ ನಾನು ಹೋಗಿ ವಿರಹಿಣಿಯ ಕಿವಿಯಲ್ಲಿ ಒಮ್ಮೆ ನಿನ್ನ ಸಂಕಟದ ಸುದ್ದಿಯನ್ನು ಹೇಳಿ ಬರುವೆನು'—ಆಮೇಲೆ? ಅನಂತರ ದುಃಖದ ರಾತ್ರಿ ಕಳೆಯಿತು. ಹೊಸ ಮಳೆಯ ನೀರು ಸುರಿಯಿತು. ಬಾಡಿಹೋದ ಹೂವು ತಲೆಯೆತ್ತಿತು. ಈ ಬಾರಿಗೆ ಪೃಥ್ವಿಯ ಸಕಲ ಜನವೂ ಹೊರಗೇ ನಿಂತರು. ಅನಂತರ ಒಳಗೆ ಒಬ್ಬನೇ ಮನುಷ್ಯ ಒಳಹೊಕ್ಕನು. ಅನಂತರ? ಅನಂತರ ನನ್ನ ಕತೆ ಮುಗಿಯಿತು.

೪

ಆದರೆ ಕತೆ ಅಷ್ಟಕ್ಕೇ ಮುಗಿಯಲಿಲ್ಲ. ಅದು ಎಲ್ಲಿಗೆ ಬಂದು ಮುಗಿಯದೆ ಉಳಿಯಿತೋ ಅಲ್ಲಿಯ ವಿವರವನ್ನು ತಿಳಿಸಿ ನನ್ನ ಈ ಬರಹವನ್ನು ಕೊನೆಗಾಣಿಸುವೆನು.

ಅಮ್ಮನನ್ನು ಕರೆದುಕೊಂಡು ತೀರ್ಥಯಾತ್ರೆಗೆ ಹೊರಟೆನು. ಜವಾಬ್ದಾರಿ ನನ್ನ ಮೇಲೆಯೇ ಬಿದ್ದಿತು. ಏಕೆಂದರೆ ಮಾವ ಈ ಸಲವೂ ಹೌರಾ ಸೇತುವೆ ದಾಟಲಿಲ್ಲ. ರೈಲಿನಲ್ಲಿ ಮಲಗಿದ್ದೆನು. ಕುಲುಕಾಟ, ಅಲುಗಾಟದಿಂದ ನಿದ್ರೆಯ ಜೊಂಪು ಹತ್ತಿತು. ಹಾಗೆಯೇ ಹಲವು ತರಹದ ಸ್ವಪ್ನ ತಲೆಯಲ್ಲಿ ಓಡಾಡುತ್ತಿತ್ತು. ಅಕಸ್ಮಾತ್ತಾಗಿ ಯಾವುದೋ ಸ್ಟೇಷನ್ನಿನಲ್ಲಿ ಎಚ್ಚರವಾಯಿತು. ಬೆಳಕಿನೊಡನೆ ಕತ್ತಲು ಬೆರೆತಂತೆ ಅದೂ ಒಂದು ಸ್ವಪ್ನವೇ. ಕೇವಲ ಆಕಾಶದ ನಕ್ಷತ್ರಗಳು ಮಾತ್ರ ಚಿರಪರಿಚಿತ ಮತ್ತೆಲ್ಲವೂ ಅಪರಿಚಿತ. ಸ್ಟೇಷನ್ನಿನ ದೀಪಗಳು ಮಾತ್ರ 'ಈ ಪೃಥ್ವಿಯು ಎಷ್ಟು ಅಪರಿಚಿತ ಮತ್ತು ನಾಲ್ಕು ದಿಕ್ಕುಗಳಲ್ಲಿಯೂ ತಾವು ಎಷ್ಟು ದೂರ ಬೆಳಕು ಮಾಡಿ ತೋರಿಸುವೆವು ನೋಡಿ' ಎನ್ನುವಂತಿದ್ದುವು. ಗಾಡಿಯೊಳಗೆ ಅಮ್ಮ ನಿದ್ರೆ ಹೋಗುತ್ತಿದ್ದಳು. ಗಾಡಿಯ ದೀಪವನ್ನು ಹಸುರು ಪರದೆಯಿಂದ ಮುಚ್ಚಿತ್ತು ಟ್ರಂಕುಗಳು, ಗಂಟುಮೂಟೆಗಳು ಎಲ್ಲಾ ಅಸ್ತವ್ಯಸ್ತವಾಗಿ ಒಂದರ ಮೇಲೊಂದು ಬಿದ್ದಿದ್ದುವು. ಅವುಗಳೆಲ್ಲ

ಸ್ವಪ್ನಲೋಕದ ಅಸ್ತವ್ಯಸ್ತ ವಸ್ತುಗಳಂತೆ, ಪ್ರದೋಷದ ಮಬ್ಬಿನ ಬೆಳಕಿನಲ್ಲಿದ್ದಂತೆ ಆ ಹಸರು ಬೆಳಕಿನಲ್ಲಿ ಕಂಡೂ ಕಾಣದಾಗಿ ಮಂಕುಮಂಕಾಗಿ ಕಾಣಿಸುತ್ತಿದ್ದವು.

ಇಂತಹ ಸಮಯದಲ್ಲಿ ಆ ಅದ್ಭುತ ಪೃಥ್ವಿಯ ಅದ್ಭುತ ರಾತ್ರಿಯಲ್ಲಿ ಯಾರದೋ ಧ್ವನಿ ಕೇಳಿಸಿತು. "ಶೀಗ್ಗಿರ್ ಚಲೇ ಆಯ್–ಎಯಿ ಗಾಡೀತೇ ಜಾಯಗಾ ಆಛೇ" (ಶೀಘ್ರ ನಡೆದು ಬನ್ನಿ. ಈ ಗಾಡಿಯಲ್ಲಿ ಜಾಗವಿದೆ.)

ಮನಸ್ಸಿಗೆ ಸಂಗೀತ ಕೇಳಿದಂತಾಯಿತು. ಬಂಗಾಲೀ ಸ್ತ್ರೀಯ ಕಂಠದ ಬಂಗಾಲೀ ಮಾತುಗಳು ಎಷ್ಟು ಮಧುರವೆಂಬುದನ್ನರಿಯಬೇಕಾದರೆ ಇಂತಹ ಅವೇಳೆಯಲ್ಲಿ ಅಸ್ಥಾನದಲ್ಲಿ ಅಕಸ್ಮಾತ್ತಾಗಿ ಕೇಳಿದಾಗ ತಾನೇ ಅದು ಗೊತ್ತಾಗುವುದು. ಆದರೆ ಆ ಕಂಠವನ್ನು ಕೇವಲ ಸ್ತ್ರೀಕಂಠವೆಂದು ಹೇಳಿ ಒಂದು ಸಾಲಿನಲ್ಲಿ ಬಿಡಲಾಗುವುದಿಲ್ಲ. ಅದೊಂದು ಅಪೂರ್ವ ಮಾನವ ಕಂಠದ ಧ್ವನಿ. ಕೇಳಿದೊಡನೆ ಹೀಗೆ ಹಿಂದೆಂದೂ ಕೇಳಿಲ್ಲವೆಂದು ಮನಸ್ಸಿಗೆ ಅನಿಸುವುದು. ನನಗಂತೂ ಕಂಠಧ್ವನಿ ಬಹುಕಾಲ ನೆನಪಿರುವುದು. ಅನಿರ್ವಚನೀಯವಾದ ಅಂತರಂಗದ ವ್ಯಕ್ತಿಯನ್ನು ಕಂಠಸ್ವರದಿಂದಲೇ ರೂಪಿಸಿಕೊಂಡೆನು. ಅವಸರವಾಗಿ ಎದ್ದು ಗಾಡಿಯ ಕಿಟಕಿಯನ್ನು ತೆರೆದು ಹೊರಗೆ ತಲೆಹಾಕಿನೋಡಿದೆನು. ಏನೂ ಕಾಣಿಸಲಿಲ್ಲ. ಪ್ಲಾಟ್‌ಫಾರಮ್ಮಿನ ಕತ್ತಲೆಯಲ್ಲಿ ನಿಂತು ಗಾರ್ಡನು ತನ್ನ ಒಕ್ಕಣ್ಣಿನ ಲಾಂದ್ರವನ್ನು ಆಡಿಸಿದನು. ಗಾಡಿ ಹೊರಟಿತು. ನಾನು ಕಿಟಕಿಯ ಹತ್ತಿರ ಕುಳಿತಿದ್ದೆ. ನನ್ನ ಕಣ್ಣೆದುರಿನಲ್ಲಿ ಯಾವ ಮೂರ್ತಿಯೂ ಇರಲಿಲ್ಲ – ಆದರೆ ಹೃದಯದೊಳಗೆ ಮತ್ತೊಂದು ಹೃದಯದ ರೂಪವನ್ನು ಕಾಣತೊಡಗಿದೆ. ಅದು ಈ ನಕ್ಷತ್ರಖಚಿತ ರಾತ್ರಿಯಂತೆ ಅವ್ಯಕ್ತಮಯವಾಗಿ ಆವರಿಸಿತ್ತು. ಆದರೆ ಅದನ್ನು ಹಿಡಿಯುವುದು ಸಾಧ್ಯವಾಗಲಿಲ್ಲ. ಓ ಧ್ವನಿಯೇ! ಗುರುತು ಹಿಡಿಯಲಾರದ ಧ್ವನಿಯೇ. ನಿಮಿಷ ಮಾತ್ರದಲ್ಲಿ ನೀನು ನನ್ನ ಚಿರಪರಿಚಯದ ಪೀಠದ ಮೇಲೆ ಬಂದು ಕುಳಿತಿರುವೆ. ನೀನು ಎಂತಹ ಆಶ್ಚರ್ಯದಿಂದ ಪರಿಪೂರ್ಣವಾದ ವಸ್ತು. ಚಂಚಲವಾದ ಕ್ಷುಬ್ಧಹೃದಯದ ಮೇಲೆ ಪುಷ್ಪದಂತೆ ಅರಳಿರುವೆ. ಆದರೂ ಅದರ ಉಬ್ಬ

ದಿಂದ ಎಸಳು ಕೂಡ ಬಾಡಿಲ್ಲ. ಅಪರಿಮಿತ ಕೋಮಲತೆಯಲ್ಲಿ ಎಳ್ಳಷ್ಟೂ ಕಚ್ಚು ಬಿದ್ದಿಲ್ಲ.

ಗಾಡಿ ಕಬ್ಬಿಣದ ಮೃದಂಗದ ಮೇಲೆ ತಾಳ ಹಾಕುತ್ತ ಹಾಕುತ್ತ ನಡೆಯಿತು. ನಾನು ಮನಸ್ಸಿನಲ್ಲೇ ಹಾಡನ್ನು ಕೇಳುತ್ತ ಕೇಳುತ್ತ ಕುಳಿತೆನು. ಅದರಲ್ಲಿ ಒಂದೇ ಒಂದು ಚರಣವಿತ್ತು–'ಗಾಡೀತೇ ಜಾಯಗಾ ಆಛೇ'–(ಗಾಡಿಯೊಳಗೆ ಜಾಗ ಇದೆ) ಇದೆಯೇನು? ಗಾಡಿಯಲ್ಲಿ ಜಾಗ ವಿದೆಯೇನು? ಜಾಗ ಸಿಕ್ಕುವುದಿದ್ದರೆ ಯಾರೂ ಯಾರನ್ನೂ ಗುರುತಿಸರು. ಆದರೂ ಆ ಗುರುತು ಅರಿಯದಿರುವಿಕೆ ಮಂಜಿನಂತೆ. ಅದು ಮಾಯೆ. ಅದು ಭಿನ್ನವಾದರೇನೇ ಗುರುತು ಅರಿಯುವುದರ ಕೊನೆಯಿರದು. ಓ ಸುಧಾಮಯ ಧ್ವನಿಯೇ! ಯಾವ ಅಪೂರ್ವ ಹೃದಯದಿಂದ ನೀನು ಹೊರಟೆ? ಅದೇನು ನನಗೆ ಚಿರಕಾಲದಿಂದ ಗುರುತಾಗಿರುವುದೇ? ಜಾಗ ವಿದೆ. ಇದೆ–ಶೀಘ್ರ ಬಾರೆಂಬ ಕರೆಯಿದೆ–ಶೀಘ್ರವಾಗಿಯೆ ಬಂದಿರುವೆ. ನಿಮಿಷಮಾತ್ರವೂ ವಿಳಂಬ ಮಾಡಿಲ್ಲ.

ರಾತ್ರಿ ಚೆನ್ನಾಗಿ ನಿದ್ರೆ ಬರಲಿಲ್ಲ. ಪ್ರಾಯಶಃ ಪ್ರತಿಯೊಂದು ಸ್ಟೇಷನ್ನಿನಲ್ಲೂ ಒಂದೊಂದು ಸಲ ತಲೆಯನ್ನು ಹೊರಕ್ಕೆ ನೀಡಿ ನೋಡು ತ್ತಿದ್ದೆ. ಭಯವಾಗತೊಡಗಿತು. "ಯಾರನ್ನು ನೋಡಲಾಗಲಿಲ್ಲವೋ ಅವಳು ರಾತ್ರಿಯಲ್ಲೇ ಎಲ್ಲೋ ಇಳಿದುಹೋದಳೋ" ಎಂದು ಭ್ರಮಿಸಿದೆನು.

ಮರುದಿನ ಬೆಳಗ್ಗೆ ಒಂದು ಸ್ಟೇಷನ್ನಿನಲ್ಲಿ ಗಾಡಿ ಬದಲಾಯಿಸ ಬೇಕಾಗಿತ್ತು. ನಮ್ಮದು ಫಸ್ಟ್‌ಕ್ಲಾಸ್ ಟಿಕೀಟು. ಗದ್ದಲವಿರಲಾರದೆಂದು ಮನಸ್ಸಿನಲ್ಲಿ ಭಾವಿಸಿದ್ದೆ. ಇಳಿದು ನೋಡಿದಾಗ ಪ್ಲಾಟ್‌ಫಾರಮ್ಮಿನ ತುಂಬ ಸಾಹೇಬರುಗಳ ಆರ್‌ಡರ್‌ಲಿ (ಡವಾಲಿ ಜವಾನರು)ಗಳು ಹಾಸಿಗೆ ಪೆಟ್ಟಿಗೆಗಳೊಡನೆ ಗಾಡಿಗಾಗಿ ಕಾಯುತ್ತಿದ್ದುದನ್ನು ಕಂಡೆನು. ಯಾರೋ ಫೌಜಿನ ದೊಡ್ಡ ಜನರಲ್ ಸಾಹೇಬರೊಬ್ಬರು ಸಂಚರಿಸಲು ಹೊರಟಿದ್ದ ರಂತೆ–ಎರಡು ಮೂರು ನಿಮಿಷಗಳಲ್ಲಿ ಗಾಡಿ ಬಂದು ನಿಂತಿತು. ಫಸ್ಟ್ ಕ್ಲಾಸಿನ ಆಶೆಯನ್ನು ಬಿಟ್ಟುಬಿಡಬೇಕಾಗುವುದೆಂದು ತಿಳಿದೆನು. ತಾಯಿ ಯೊಡನೆ ಯಾವ ಗಾಡಿಯಲ್ಲಿ ಹತ್ತಬೇಕೆಂದು ಆಲೋಚಿಸುತ್ತಿದ್ದೆನು. ಎಲ್ಲ ಗಾಡಿಯಲ್ಲೂ ಗುಂಪು. ಗಾಡಿಯ ಬಾಗಿಲುಗಳಲ್ಲಿ ಇಣಿಕಿ ನೋಡುತ್ತ

ತಿರುಗುತ್ತಿದ್ದೆನು. ಆ ಸಮಯದಲ್ಲಿ ಸೆಕೆಂಡ್ ಕ್ಲಾಸ್ ಗಾಡಿಯಿಂದ ಒಬ್ಬ ಹುಡುಗಿ ನಮ್ಮ ತಾಯಿಯನ್ನು ಉದ್ದೇಶಿಸಿ–'ಆಪ್‌ನಾರಾ ಆಮಾದೇರ್ ಗಾಡೀತೆ ಆಶೂನ್‌ನಾ–ಎಖಾನೆ ಜಾಯುಗಾ ಆಛೆ' ('ನೀವುಗಳು ನಮ್ಮ ಗಾಡಿಗೆ ಬನ್ನಿ–ಇಲ್ಲಿ ಜಾಗವಿದೆ') ಎಂದು ಹೇಳಿದಳು.

ನಾನಂತೂ ಬೆಚ್ಚಿಬಿದ್ದೆ. ಆ ಆಶ್ಚರ್ಯಕರ ಮಧುರ ಕಂಠ ಮತ್ತು ಆ ಸಂಗೀತದ ಧ್ವನಿ–"ಜಾಯುಗಾ ಆಛೇ." ಕ್ಷಣಮಾತ್ರವೂ ಕಾಲಹರಣ ಮಾಡದೆ ತಾಯಿಯೊಡನೆ ಆ ಗಾಡಿಯಲ್ಲಿ ಹತ್ತಿದೆನು. ಸಾಮಾನುಗಳನ್ನು ಎತ್ತಲು ವೇಳೆಯಿಲ್ಲ. ನನ್ನಂತಹ ಕೈಲಾಗದವನು ಈ ಪ್ರಪಂಚದಲ್ಲೇ ಇಲ್ಲವೆನಿಸಿತು. ಆ ಹುಡುಗಿಯೇ ಅವಸರ ಅವಸರವಾಗಿ ಗಾಡಿ ಮುಂದಕ್ಕೆ ಹೋಗುತ್ತಿದ್ದ ಹಾಗೆಯೇ ಕೂಲಿಗಳ ಕೈಗಳಿಂದ ನಮ್ಮ ಹಾಸಿಗೆ ಪೆಟ್ಟಿಗೆಗಳನ್ನು ಗಾಡಿಯೊಳಕ್ಕೆ ಎಳೆದುಕೊಂಡಳು. ನನ್ನದೊಂದು ಕ್ಯಾಮರಾ ಸ್ಟೇಷನ್ನಿನಲ್ಲೇ ಉಳಿಯಿತು. ನೆನಪಾಗಲಿಲ್ಲ.

ಆಮೇಲೆ—ಏನು ಬರೆಯಲಿ—ನನ್ನ ಮನಸ್ಸಿನಲ್ಲಿ ಒಂದು ಅಖಂಡ ಆನಂದದ ಚಿತ್ರವಿದೆ. ಅದನ್ನು ಎಲ್ಲಿ ಆರಂಭಿಸಲಿ. ಎಲ್ಲಿ ಮುಗಿಸಲಿ. ಕುಳಿತುಕೊಂಡು ವಾಕ್ಯದ ಮೇಲೆ ವಾಕ್ಯವನ್ನು ಹೊಸೆಯಲು ಎಚ್ಚೆಯಿಲ್ಲ.

ಈಗ ಆ ಧ್ವನಿಯನ್ನು ಕಣ್ಣಾರ ಕಂಡೆನು. ಆದರೂ ಅದು ಧ್ವನಿಯೆಂದೇ ಮನಸ್ಸಿಗೆ ತೋರುತ್ತಿತ್ತು. ಅಮ್ಮನ ಮುಖ ನೋಡಿದೆನು. ಅವಳೂ ಎವೆಯಿಕ್ಕದೆ ಆ ಹುಡುಗಿಯನ್ನು ನೋಡುತ್ತಿದ್ದಳು. ಹುಡುಗಿಯ ವಯಸ್ಸು ಹದಿನಾರೋ-ಹದಿನೇಳೋ ಇರಬಹುದು-ಆದರೆ ನವಯೌವನವು ಅವಳ ತನುಮನಗಳಲ್ಲಿ ಎಲ್ಲೂ ಹೊರೆ ಹೊರಿಸಿಲ್ಲ. ಅವಳ ನಡಿಗೆ ಸಹಜ; ದೃಷ್ಟಿ ನಿರ್ಮಲ. ಸೌಂದರ್ಯದ ಶುಚಿತ್ವವು ಅಪೂರ್ವ, ಅವಳಲ್ಲಿ ಎಲ್ಲೂ ಸ್ವಲ್ಪವೂ ಜಡತೆಯಿರಲಿಲ್ಲ.

ನಾನು ನೋಡಿದ್ದನ್ನು ವಿಸ್ತಾರಗೊಳಿಸಿ ಹೇಳುವುದು ನನಗೆ ಅಸಾಧ್ಯ. ಅಷ್ಟೇಕೆ ಅವಳು ಯಾವ ಬಣ್ಣದ ಬಟ್ಟೆಯನ್ನು ಯಾವ ರೀತಿಯಲ್ಲಿ ಉಟ್ಟಿದ್ದಳೆಂಬುದನ್ನೂ ಹೇಳಲು ನನಗೆ ಸಾಧ್ಯವಿಲ್ಲ. ಅವಳ ಉಡಿಗೆ ತೊಡಿಗೆಗಳಲ್ಲಿ ದೃಷ್ಟಿಯನ್ನು ತಮ್ಮ ಕಡೆಗೆ ಎಳೆಯುವಂಥಾ ವಿಶೇಷತ್ವವೇನೂ ಇರಲಿಲ್ಲ. ಅವಳು ತನ್ನ ಸುತ್ತಮುತ್ತಲಿನ ಎಲ್ಲರ

ಗಿಂತಲೂ ಮೇಲಿನವಳಾಗಿದ್ದಳು—ಸುಗಂಧರಾಜನ ಬಿಳಿಯ ಮೊಗ್ಗಿನ ಹಾಗೆ-ತೆಳುವಾದ ವೃಂತದ ಮೇಲೆ ನಿಂತು ಯಾವ ಗಿಡದಲ್ಲಿ ಅರಳಿದ್ದಳೋ ಅದನ್ನು ಅತಿಕ್ರಮಿಸಿ ಅರಳಿದಂತೆ ಇದ್ದಳು. ಅವಳೊಡನೆ ಇಬ್ಬರು ಮೂವರು ಸಣ್ಣಸಣ್ಣ ಹುಡುಗಿಯರಿದ್ದರು. ಅವರುಗಳೊಡನೆ ಅವಳ ಮಾತುಕತೆ-ಹಾಸ್ಯ-ನಗು ಇವುಗಳಿಗೆ ಕೊನೆಮೊದಲಿರಲಿಲ್ಲ. ನಾನು ಕೈಯಲ್ಲೊಂದು ಪುಸ್ತಕವನ್ನು ಹಿಡಿದುಕೊಂಡು ಅತ್ತಕಡೆ ಕಿವಿಗೊಟ್ಟು ಕುಳಿತಿದ್ದೆನು. ನನ್ನ ಕಿವಿಗೆ ಬಿದ್ದದ್ದೆಲ್ಲಾ ಹುಡುಗರೊಡನೆ ಹುಡುಗಾಟದ ಮಾತುಗಳೇ-ಅವುಗಳಲ್ಲಿನ ವಿಶೇಷತ್ವವೇನೆಂದರೆ ವಯಸ್ಸಿನ ಅಂತರವಿರಲಿಲ್ಲ. ಸಣ್ಣವರೊಡನೆ ಅವಳು ಅನಾಯಾಸವಾಗಿ ಸಣ್ಣವಳಾಗಿದ್ದಳು. ಅವಳ ಹತ್ತಿರ ಚಿತ್ರಗಳಿರುವ ಮಕ್ಕಳ ಕತೆ ಪುಸ್ತಕಗಳಿದ್ದುವು. ಅವುಗಳಲ್ಲಿನ ಯಾವುದೋ ಒಂದು ಕತೆ ಹೇಳುವಂತೆ ಅವರು ಪೀಡಿಸತೊಡಗಿದರು. ಆ ಕತೆಯನ್ನು ಅವರು ಇಪ್ಪತ್ತು ಇಪ್ಪತ್ತೈದು ಸಾರಿ ಕೇಳಿರಲು ಸಂದೇಹವಿಲ್ಲ. ಆದರೂ ಮತ್ತೆ ಕೇಳಲು ಇಷ್ಟೇಕೆ ಆತುರಪಡುತ್ತಿರುವರೆಂಬುದು ನನಗೆ ತಿಳಿಯಿತು. ಅವಳ ಸುಧಾಕಂಠದ ಮಾಯೆಯ ಕೋಲಿನಿಂದ ಮುಟ್ಟಿದ್ದೆಲ್ಲಾ ಸುವರ್ಣವಾಗುವಂತಿತ್ತು. ಹುಡುಗಿಯ ಅಂಗಾಂಗಗಳು-ಮನಸ್ಸು ಎಲ್ಲವೂ ಪ್ರಾಣದಿಂದ ತುಂಬಿದ್ದಿತು. ಅವಳ ಚಲನ, ಮಾತುಕತೆ ಎಲ್ಲವೂ ಜೀವಶಕ್ತಿಯಿಂದ ತುಂಬಿ ತುಳುತ್ತಿದ್ದವು. ಆ ಹುಡುಗಿಯರು ಅವಳ ಬಾಯಿಂದ ಯಾವ ಕತೆ ಕೇಳಿದರೂ ಅದು ಹೊಸದಾಗಿ ಕಾಣುತ್ತಿತ್ತು. ಅವರ ಹೃದಯದ ಮೇಲೇ ಅವಳ ಜೀವಝುರಿ ಚಿಮ್ಮಿ ಬೀಳುತ್ತಿತ್ತು. ಅವಳ ಉತ್ಸಾಹದಿಂದ ತುಂಬಿದ ಜೀವವು ಅಂದು ನಾನು ಕಂಡ ಸೂರ್ಯಕಿರಣಗಳನ್ನು ಸಜೀವಗೊಳಿಸಿತು. ನನ್ನ ಮನದಲ್ಲಿ ನನ್ನ ಸುತ್ತಲೂ ನನ್ನನ್ನು ಮುಚ್ಚಿಕೊಂಡಿರುವ ಆಕಾಶವು ಈ ತರುಣಿಯ ದಣಿಯದ ಮಲಿನವಾಗದ ಪ್ರಾಣದ ವಿಶ್ವವ್ಯಾಪೀ ವಿಸ್ತಾರವೆಂಬುದು ನನಗೆ ಗೋಚರವಾಯಿತು. ಮುಂದಿನ ಸ್ಟೇಷನ್ನನ್ನು ಸೇರಿದೊಡನೆಯೇ ಅವಳು ತಿಂಡಿ ಮಾರುವವನನ್ನು ಕರೆದು ಖಾರದ ಕಡಲೆ ಕೊಂಡು ಹುಡುಗರೊಡನೆ ಕಲೆತು ಸಣ್ಣ ಹುಡುಗಿಯಂತೆಯೇ ಹಾಸ್ಯಲಲ್ಲೆಯೊಡನೆ ತಿನ್ನಲಾರಂಭಿಸಿದಳು. ನನ್ನ ಸ್ವಭಾವ ಸುತ್ತಲೂ ಬೇಲಿ ಹಾಕಿದ ಹಾಗೆ ಇರು

ವಂಥಾದ್ದು. ನಾನೇಕೆ ಸಹಜರೀತಿಯಲ್ಲಿ ನಗುಮುಖದೊಡನೆ ಆ ಹುಡು ಗಿಯ ಹತ್ತಿರದಿಂದ ಒಂದು ಹಿಡಿ ಹುರಿಗಾಳು ಕೇಳಿ ತೆಗೆದುಕೊಂಡು ತಿನ್ನ ಬಾರದಾಗಿತ್ತು? ಕೈನೀಡಿ ನನ್ನ ಆಸೆಯನ್ನೇಕೆ ತೀರಿಸಿಕೊಳ್ಳಲಿಲ್ಲ?

ಅಮ್ಮನ ಮನಸ್ಸು ಒಪ್ಪಿ ಒಪ್ಪದಂತೆ ಇತ್ತು. ಗಾಡಿಯಲ್ಲಿ ನಾನು ಗಂಡಸು ಕುಳಿತಿರುವೆನು. ಆದರೂ ಇವಳಿಗೆ ಏನೇನೂ ಸಂಕೋಚವಿಲ್ಲ. ತಿನ್ನುವುದರಲ್ಲೂ ಬರ ಬಂದವಳಂತೆ ತಿನ್ನುತ್ತಿದ್ದಾಳೆ. ಹೀಗೆ ನಡೆಯು ವುದು ಮರ್ಯಾದಸ್ಥರ ಪದ್ಧತಿಯಲ್ಲವೆಂಬುದನ್ನೂ ಅರಿಯಳು. ಅಮ್ಮನು ಮನಸ್ಸಿನಲ್ಲಿ 'ಈ ಹುಡುಗಿಗೆ ವಯಸ್ಸಾಗಿದೆ–ಆದರೆ ಯಾರೂ ಸರಿಯಾಗಿ ಬುದ್ಧಿ ಕಲಿಸಿಲ್ಲ'–ಎಂದು ಅಂದುಕೊಂಡಳು. ನಮ್ಮ ತಾಯಿಗೆ ಅಕಸ್ಮಾ ತ್ತಾಗಿ ಯಾರೊಡನೆಯಾದರೂ ಮಾತನಾಡುವುದೆಂದರೆ ಆಗದ ಕೆಲಸ. ಜನರ ಸಹವಾಸದಿಂದ ದೂರದಲ್ಲಿರುವುದೇ ಅವಳ ಸ್ವಭಾವ. ಈ ಹುಡುಗಿಯ ಪೂರ್ವೋತ್ತರಗಳನ್ನು ವಿಚಾರಿಸಲು ಅವಳಿಗೆ ಬಹು ಕುತೂಹಲವಿತ್ತು. ಆದರೆ ಸ್ವಾಭಾವಿಕ ಬಾಧೆಯಿದ್ದುದರಿಂದ ಅದು ಸಾಧ್ಯವಿರಲಿಲ್ಲ.

ಈ ವೇಳೆಗೆ ಗಾಡಿ ಒಂದು ದೊಡ್ಡ ಸ್ಟೇಷನ್ನಿಗೆ ಬಂದು ನಿಂತಿತು. ಆ ಜನರಲ್ ಸಾಹೇಬರ ಜೊತೆಗಾರರು ಕೆಲವರು ಆ ಸ್ಟೇಷನ್ನಿನಲ್ಲಿ ಹತ್ತಲು ಯತ್ನಿಸುತ್ತಿದ್ದರು. ಗಾಡಿಯಲ್ಲಿ ಎಲ್ಲೂ ಜಾಗವಿರಲಿಲ್ಲ. ಬಾರಿ ಬಾರಿಗೆ ನಮ್ಮ ಗಾಡಿಯ ಎದುರಿನಲ್ಲಿ ತಿರುಗಲಾರಂಭಿಸಿದರು. ಅಮ್ಮ ಬಹು ಭಯಪಟ್ಟಿದ್ದಳು. ನನಗೂ ಮನಸ್ಸಿನಲ್ಲಿ ನೆಮ್ಮದಿಯಿತ್ತೆಂದು ಹೇಳಲು ಸಾಧ್ಯವಿಲ್ಲ.

ಗಾಡಿ ಹೊರಡಲು ಸ್ವಲ್ಪ ಹೊತ್ತಿರುವಾಗ ಒಬ್ಬ ದೇಶೀಯ ರೈಲ್ವೇ ಕೆಲಸಗಾರ ಹೆಸರು ಬರೆದಿದ್ದ ಎರಡು ರಟ್ಟುಗಳನ್ನು ಗಾಡಿಯಲ್ಲಿನ ಎರಡು 'ಬೆಂಚು'ಗಳ ತಲೆಯ ಬಳಿ ಸೆಕ್ಕಿಸಿಬಿಟ್ಟು ನನ್ನೊಡನೆ–'ಈ ಗಾಡಿಯ ಎರಡು ಬೆಂಚುಗಳು ಮುಂಚಿನಿಂದಲೇ ಇಬ್ಬರು ಸಾಹೇಬರಿಗಾಗಿ ರಿಸರ್ವ್ ಆಗಿದೆ. ನೀವು ಬೇರೆ ಗಾಡಿಗೆ ಹೋಗಬೇಕಾಗುತ್ತೆ' ಎಂದು ಹೇಳಿದನು.

ನಾನು ಅವಸರ ಅವಸರವಾಗಿ ಗಾಬರಿಯಿಂದ ಎದ್ದು ನಿಂತೆನು. ಆ ಹುಡುಗಿ ಹಿಂದಿಯಲ್ಲಿ 'ನಾನು ಗಾಡಿ ಬಿಡುವುದಿಲ್ಲ' ಎಂದಳು.

ರೈಲ್ವೆ ಕೆಲಸಗಾರ ಸ್ವಲ್ಪ ದರ್ಪದಿಂದ 'ಬಿಡದಿದ್ದರೆ ಬೇರೆ ದಾರಿಯಿಲ್ಲ' ಎಂದು ಹೇಳಿದನು.

ಆದರೆ ಹುಡುಗಿ ಅಲ್ಲಿಂದ ಕದಲುವ ಲಕ್ಷಣ ಕಾಣದಿರಲು ಅವನು ಇಳಿದುಹೋಗಿ ಆಂಗ್ಲ ಸ್ಟೇಷನ್ ಮಾಸ್ಟರನ್ನು ಕರೆತಂದನು—ಆತನು ಬಂದು ನನ್ನೊಡನೆ—'ನನಗೆ ಬಹಳ ವ್ಯಸನವಾಗುತ್ತೆ. ಆದರೆ ನೋಡಿ ಉಪಾಯವಿಲ್ಲ........' ಎಂದು ಹೇಳತೊಡಗಿದನು.

"ನಾನು ಕೂಲೀ–ಕೂಲೀ" ಎಂದು ಕೂಗಲಾರಂಭಿಸಿದೆನು. ಹುಡುಗಿ ಎದ್ದುನಿಂತು ಎರಡು ಕಣ್ಣುಗಳಿಂದಲೂ ಬೆಂಕಿಯನ್ನು ಕಾರುತ್ತ "ಊಹೂಂ–ನೀವು ಹೋಗಕೂಡದು–ಇದ್ದಲ್ಲೇ ಸುಮ್ಮನೆ ಕುಳಿತಿರಿ" ಎಂದಳು.

ಹೀಗೆಂದು ಅವಳು ಬಾಗಿಲ ಹತ್ತಿರ ಹೋಗಿ ನಿಂತು ಸ್ಟೇಷನ್ ಮಾಸ್ಟರೊಡನೆ ಇಂಗ್ಲೀಷಿನಲ್ಲಿ ಮಾತಿಗಾರಂಭಿಸಿದಳು—"ಈ ಗಾಡಿ ಮುಂಚಿನಿಂದ ರಿಜರ್ವ್ ಆಗಿತ್ತೆಂಬ ಮಾತು ಶುದ್ಧ ಸುಳ್ಳು" ಎಂದು ಹೇಳಿ ಹೆಸರು ಬರೆದಿದ್ದ ರಟ್ಟುಗಳನ್ನು ತೆಗೆದು ಪ್ಲಾಟ್‌ಫಾರಂನ ಮೇಲೆ ಎಸೆದಳು.

ಈ ನಡುವೆ ಡವಾಲಿ ಜವಾನನೊಡನೆ ಯೂನಿಫಾರಂಧಾರೀ ಸಾಹೇಬರು ಗಾಡಿಯ ಬಳಿಗೆ ಬಂದು ನಿಂತರು. ಗಾಡಿಯಲ್ಲಿ ಸಾಮಾನುಗಳನ್ನಿಡಲು ಅವರುಗಳು ಮೊದಲು 'ಆರ್ಡರ್‌ಲಿ'ಗೆ ಸನ್ನೆಮಾಡಿದರು. ಅನಂತರ ಹುಡುಗಿಯ ಮುಖ ನೋಡಿ, ಅವಳ ಮಾತುಗಳನ್ನು ಕೇಳಿ, ಭಾವವನ್ನು ಕಂಡು ಸ್ಟೇಷನ್‌ಮಾಸ್ಟರನ್ನು ಚುಚ್ಚಿ ಅವರನ್ನು ಪಕ್ಕಕ್ಕೆ ಕರೆದುಕೊಂಡು ಹೋಗಿ ಏನು ಹೇಳಿದರೋ ಗೊತ್ತಿಲ್ಲ. ರೈಲು ಹೊರಡುವ ವೇಳೆ ಮೀರಿದ್ದರೂ ಮತ್ತೊಂದು ಗಾಡಿ ಜೋಡಣೆಯಾಗಿ ಅವರುಗಳು ಅದರಲ್ಲಿ ಹತ್ತಿ ಕುಳಿತ ನಂತರವೇ ರೈಲು ಹೊರಟಿತು. ಆ ಹುಡುಗಿ ಹುರಿಗಾಳಿನ ಮತ್ತೊಂದು ಪೊಟ್ಟಣವನ್ನು ಬಿಚ್ಚಿ ನಿಶ್ಚಿಂತತೆಯಿಂದ ಹುಡುಗರೊಡನೆ ತಿನ್ನತೊಡಗಿದಳು. ನಾನು ನಾಚಿಕೆಯಿಂದ ಕುಗ್ಗಿ ಕಿಟಕಿಯ ಹೊರಗೆ ತಲೆಹಾಕಿಕೊಂಡು ಪ್ರಕೃತಿಯ ಸೊಬಗನ್ನು ನೋಡತೊಡಗಿದೆ.

ರೈಲು ಕಾನ್‌ಪುರವನ್ನು ಸೇರಿತು. ಹುಡುಗಿ ಸಾಮಾನುಗಳನ್ನು ಕಟ್ಟಿ ಸಿದ್ಧವಾಗಿದ್ದಳು. ಹಿಂದೂಸ್ಥಾನೀ ಆಳೊಬ್ಬನು ಬಂದು ಇವರು ಗಳನ್ನು ಇಳಿಸಿಕೊಂಡನು.

ಅಮ್ಮನಿಗೆ ಆಗ ಸುಮ್ಮನಿರಲಾಗಲಿಲ್ಲ. "ನಿನ್ನ ಹೆಸರೇನಮ್ಮ?" ಎಂದು ಕೇಳಿದಳು.

ಹುಡುಗಿ "ನನ್ನ ಹೆಸರು ಕಲ್ಯಾಣಿ" ಎಂದಳು.

ಅದನ್ನು ಕೇಳಿ ಅಮ್ಮನೂ ನಾನೂ ಬೆಚ್ಚಿಬಿದ್ದೆವು.

"ನಿಮ್ಮ ತಂದೆ...."

"ಅವರು ಇಲ್ಲಿಯ ಡಾಕ್ಟರು. ಅವರ ಹೆಸರು ಶಂಭುನಾಥಸೇನರು."

ಅನಂತರ ಅವರೆಲ್ಲ ಇಳಿದು ನಡೆದರು.

## ಉಪಸಂಹಾರ

ಮಾವನ ನಿಷೇಧವನ್ನು ಅಲಕ್ಷ್ಯಮಾಡಿ, ಮಾತೃವಿನ ಆಜ್ಞೆಯನ್ನೂ ತಳ್ಳಿಕೊಟ್ಟು ಕಾನ್‌ಪುರಕ್ಕೆ ಬಂದೆ. ಕಲ್ಯಾಣಿಯ ತಂದೆಯನ್ನೂ ಕಲ್ಯಾಣಿ ಯನ್ನೂ ಕಂಡು ಮಾತನಾಡಿದೆನು. ಕೈ ಮುಗಿದೆನು, ತಲೆ ತಗ್ಗಿಸಿದೆನು – ಶಂಭುನಾಥಬಾಬುಗಳ ಹೃದಯವೂ ಕರಗಿತು – ಆದರೆ ಕಲ್ಯಾಣಿಯು —"ನಾನು ಮದುವೆ ಮಾಡಿಕೊಳ್ಳುವುದಿಲ್ಲ" ಎಂದಳು.

"ಏತಕ್ಕೆ?" ಎಂದು ನಾನು ವಿಚಾರಿಸಿದೆನು.

"ಮಾತೃವಿನ ಆಜ್ಞೆ" ಎಂದು ಅವಳೆಂದಳು.

"ಎಂಥಾ ಸರ್ವನಾಶ! ಇಲ್ಲಿಯೂ ಮಾತುಲನಿರುವನೇನು?" ಎಂದೆನು.

ಅನಂತರ ಮಾತೃಭೂಮಿ ಇದೆಯೆಂಬ ಸಂಗತಿಯನ್ನರಿತೆನು. ಆ ವಿವಾಹ ನಿಂತ ಕಾಲದಿಂದ ಕಲ್ಯಾಣಿಯು ಸ್ತ್ರೀಯರ ವಿದ್ಯಾಭ್ಯಾಸ ವ್ರತ ವನ್ನು ಕೈಗೊಂಡಿರುವಳೆಂಬುದು ತಿಳಿಯಿತು.

ಆದರೆ ನಾನು ಆಶೆ ಬಿಡಲಾರದವನಾಗಿದ್ದೆ. ಆ ಧ್ವನಿ ನನ್ನ ಹೃದಯದಲ್ಲಿ ಇಂದಿಗೂ ಕೇಳಿಸುತ್ತಿದೆ. ಅದು ಯಾವುದೋ ಆಚೆಯ ದಡದ ಕೊಳಲು ದನಿ. ನನ್ನ ಪ್ರಪಂಚದ ಹೊರಗಿನಿಂದ ಬಂದದ್ದು–

ಸಮಸ್ತ ಜಗತ್ತಿನ ಗೃಹಸ್ಥಾಶ್ರಮದ ಹೊರಕ್ಕೂ ಹೊರಟಿತು. ಆ ರಾತ್ರಿಯ ಕತ್ತಲೆಯಲ್ಲಿ ನನ್ನ ಕಿವಿಯನ್ನು ಮುಟ್ಟಿದ್ದ – 'ಜಾಯುಗಾ ಆಛೇ' (ಜಾಗವಿದೆ) ಎಂಬ ಮಾತು ನನ್ನ ಚಿರಜೀವನದ ಸಂಗೀತದ ಪಲ್ಲವಿಯಾಯಿತು. ಆಗ ನನ್ನ ವಯಸ್ಸು ಇಪ್ಪತ್ತಮೂರು. ಈಗ ಇಪ್ಪತ್ತೇಳಾಗಿದೆ. ಇನ್ನೂ ಆಶೆಯನ್ನು ತ್ಯಜಿಸಿಲ್ಲ, ಆದರೆ ಮಾತುಲನನ್ನು ತ್ಯಜಿಸಿರುವೆನು. ಏನೂ ಅರಿಯದ ಒಂದು ಮಗುವೆಂದು ಅಮ್ಮನು ಇನ್ನೂ ನನ್ನ ಕೈಬಿಟ್ಟಿಲ್ಲ.

ನಾನು ಮದುವೆಯ ಆಶೆಯನ್ನಿಟ್ಟುಕೊಂಡಿರಬಹುದೆಂದು ನಿಮ್ಮ ಮನಸ್ಸಿಗೆ ತೋರುತ್ತಿದೆಯಲ್ಲವೇ? ನನ್ನ ಮನಸ್ಸಿನಲ್ಲಿರುವುದು ಆ ರಾತ್ರಿಯ ಅಜ್ಞಾತಕಂಠದ ಮಧುರ ಧ್ವನಿಯ ಆಶೆ. 'ಜಾಯುಗಾ ಆಛೇ, ನಿಶ್ಚಯ್ ಆಛೇ'—(ಜಾಗವಿದೆ. ನಿಶ್ಚಯವಾಗಿಯೂ ಇದೆ) ಇಲ್ಲವಾದರೆ ನಿಲ್ಲುವುದೆಲ್ಲಿ? ಆದ್ದರಿಂದಲೆ ವರ್ಷಗಳ ಮೇಲೆ ವರ್ಷಗಳು ಕಳೆದರೂ ನಾನು ಇಲ್ಲಿಯೇ ನಿಂತಿರುವೆನು – ಕಾದಿರುವೆನು. ಆ ಕಂಠದ ಧ್ವನಿಯನ್ನು ಕೇಳಿ ಅವಕಾಶವಾದಾಗ ಆಕೆಯದಾಗಿ ಯಾವುದನ್ನಾದರೂ ಕೆಲಸವನ್ನು ಮಾಡಿಕೊಡುವೆನು. ಅಂತೂ ಮನಸ್ಸೇನೋ 'ಇದೋ ಜಾಗ ಸಿಕ್ಕಿದೆ' ಎನ್ನುತ್ತಿದೆ – "ಓ ಅಪರಿಚಿತೇ! ನಿನ್ನ ಪರಿಚಯ ಪೂರ್ಣವಾಗಿ ಆಗಲಿಲ್ಲ. ಪೂರ್ಣವೂ ಆಗದು. ಆದರೆ ನನ್ನ ಭಾಗ್ಯ ಒಳ್ಳೆಯದು. ಆದ್ದರಿಂದಲೇ ನಾನು ಜಾಗವನ್ನು ಪಡೆದಿರುವೆನು."

(ಕ್ರಿ. ಶ. ೧೯೧೪)

Printed at OMKAR PRESS, Gowdanpet, Bangalore City.